Photo by D. I. Chanthamian



ಬಹುಮಾನ
ಪಡೆದ ಶೀರ್ಷಿಕೆ

ಚಾ ಣಾ ಕೃತಿ

ಕಳಿಸಿದವರು:
ಶಂಕರ ಕೊಂಗಿ, ಹುಬ್ಬಳ್ಳಿ

ಹಿಮಗಿರಿಯಿಂದ ಕನ್ಯಾಕುಮಾರಿಯವರೆಗೆ
ಹಿಂದೀ, ತೆಲುಗು, ತಮಿಳು ಭಾಷೆಗಳಲ್ಲಿ ಬಿಡುಗಡೆ!






స్టూడియో
భరణి

భానుమతి
రామారావు...రంగారావు...రేలంగి
డైరెక్షన్...భానుమతి • నిర్మాత... రామకృష్ణ

ನಿಮ್ಮ ಅಭಿಮಾನ ಥಿಯೇಟರಿನಲ್ಲಿ ನೋಡಿರಿ

## ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು ತಡೆದು ಆರೋಗ್ಯ ಕಾಪಾಡುವ ಅಮೃತಪಾನ.



ತಯಾರಕರು :

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿ.,**

ಮಲ್ಲೇಶ್ವರಂ - ಬೆಂಗಳೂರು - 3

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ ದೊರೆಯುತ್ತದೆ

ವ್ಯಾಪಾರದ ಗುರುತು 

**ಗ್ರೈಪ್ ಸಿರಪ್**



## ಮಧ್ಯದಲ್ಲಿ ತಾಜಾ ಫಲವಿರುವ

ಮಿಠಾಯಿಗಳು, ಎಲ್ಲಾ ನೈಸರ್ಗಿಕ ವಿಟಾಮಿನ್ಸ್‌ಗಳಿಂದ ಕೂಡಿವೆ. ಅಲ್ಲದೇ ಇವುಗಳೂ ದೊರಕುತ್ತವೆ: ಕ್ರೀಮ್ ಟಾಫಿಗಳು, ಬಾರ್ಲಿ ಸುಗರ್ ಲಾಲ್ಲಿಗಳು, ಪೆಪರ್‌ಮಿಂಟ್ ಲಾಝೆಂಜ್‌ಗಳು ಮತ್ತು ಇನ್ನಿತರ ನೂರಾರು ಬಗೆಗಳು.







ಭಾರತದಲ್ಲಿರುವ ಏಕಮಾತ್ರ ಏರ್-ಕಂಡಿಶನ್ ಮಿಠಾಯಿ ಕಾರ್ಖಾನೆಯಲ್ಲಿ ತಯಾರಿಸಲ್ಪಟ್ಟ ಆದರ್ಶ ಮಿಠಾಯಿಗಳು.

ASP-M-17

# ಚಂದಮಾಮ

ಸಂಚಾಲಕರು:
'ಚಕ್ರಪಾಣಿ'

ಹಬ್ಬಗಳ ತಿಂಗಳು ಬಂದಿವೆ. ಶ್ರೀ ಕೃಷ್ಣ ಜಯಂತಿ, ವಿನಾಯಕ ಚತುರ್ಥಿ, ವರಲಕ್ಷ್ಮಿ ಮೊದಲಾದ ಅನೇಕ ಹಬ್ಬಗಳ ಸರಿಸೆ. ದೇವರ ಹೆಸರು ಹೇಳುತ್ತಾ ಜನೋಪಕಾರ, ಲೋಕೋಪ ಕಾರಗಳನ್ನು ಮಾಡುವುದೇ ಹಬ್ಬಗಳ ಮೂಲ ಉದ್ದೇಶವೆಂಬುದನ್ನು ಯಾರೂ ಮರೆಯಬಾರದು. ದಕ್ಷಿಣ ಭಾರತದ ಜೀವನದಿಯಾದ ಕಾವೇರಿಯ ಹುಟ್ಟು ಈ ಬಗೆಯ ಲೋಕೋಪಕಾರದ ಉದ್ದೇಶದಿಂದಲೇ ಆಯಿತು. ಇದನ್ನು ಈ ಸಂಚಿಕೆಯಲ್ಲಿ ಪ್ರಕಟವಾದ 'ಕಾವೇರಿ ನದಿ' ಎಂಬ ಕತೆ ಸಾರುತ್ತದೆ. ಈ ಕತೆಯಲ್ಲಿ ಲೋಕೋಪಕಾರದ ದಿವ್ಯಸಂದೇಶವನ್ನು ಸಾರಿದವನು ಭಾರತೀಯರ ಪ್ರಥಮ ಪೂಜೆಗೆ ಪಾತ್ರನಾದ ಗಣಪತಿ. ಆದುದರಿಂದ ಹಬ್ಬಗಳಲ್ಲಿ ನೀವೂ ಸಂತೋಷಪಡುವುದಲ್ಲದೆ ಇನ್ನೊಬ್ಬರ ಸಂತೋಷಕ್ಕೂ ಕಾರಣರಾಗಬೇಕು.

ಸಂಪುಟ : ಸೆಪ್ಟೆಂಬರ್ ೧೯೫೩ : ಸಂಚಿಕೆ
೧. ೩

# ಸರಾಫ - ಕತ್ತೆ

ಒಂದೂರಲಿ ಬುದ್ಧಿಮತ್ತ
ಕತ್ತೆಯಿತ್ತು, ಅದರ ಒಡೆಯ
ಮುದಿ ಸರಾಫ, ಬಹಳ ಜಿಪುಣ
ಭಾರಿ ಧನಿಕ, ಬಲು ನಿರ್ದಯ.

ಅವನೊಂದಿನ ಕತ್ತೆ ಮೇಲೆ
ಕುಳಿತು ಪಯಣ ಮಾಡುತಿದ್ದ;
ದಾರಿಯಲ್ಲಿ ಹುಲುಗಾವ
ಲೊಂದ ನೋಡಿ ಇಂತೆಂದ:





" ಕತ್ತೆಯೆ, ನಿನಗಾ ಊರಲಿ
ದುಡ್ಡು ಕೊಟ್ಟು ಹುಲ್ಲು ಕೊಳ್ಳ
ಬೇಕು ಬರಿದೆ, ಇಲ್ಲಿ ನೀನು
ಹೊಟ್ಟೆತುಂಬ ಮೆಲ್ಲು ಹುಲ್ಲ"

ಹೀಗೆ ನುಡಿದು ಮರದ ಬುಡದಿ
ಒರಗಿದ ದಣಿವಾರಿಸಲು
ಕತ್ತೆ ದೊರೆತ ಸ್ವಾತಂತ್ರ್ಯದಿ
ಹೋಯ್ತು ಹುಲ್ಲು ಮೇಯಲು.

ಕಳಕಳಿಸುವ ಹಸಿರು ಹುಲ್ಲು
ಚೂರು ಚಾರು ಮೆಲ್ಲುತ
ಕೂಗಿ ಕುಣಿದು ಅಲ್ಲಿ ಇಲ್ಲಿ
ಹೊರಳಿ ಉರುಳಿ ತಿರುಗುತ;





"ನವಗಿರಿನಂದ"

ಒಡೆಯ ನೀನು, ಮನುಜ ನಿಮ್ಮ
ನಿಮ್ಮೊಳಗಿನ ಹಗೆ ವಿಚಿತ್ರ.
ನಮ್ಮದೆಲ್ಲ ಬಹಳ ಮೈತ್ರಿ.
ನಮ್ಮ ಹಗೆ ಮನುಷ್ಯಮಾತ್ರ!

ಎನ್ನ ಹುಲ್ಲು ಮೇಯಬಿಟ್ಟು
ನಿನ್ನ ನೀನೆ ಕಾದುಕೊ"
ಎಂದು ಹೇಳಿ ಕೊಂಟೆ ಕತ್ತೆ
ಹುಲ್ಲು ಮೇಯ ಹೋಯ್ತು ಕೊ!

ಪಾಡಿತು ಕೊರಳೆತ್ತಿ ಕೂಗಿ
'ಹ್ರಾಂ ಹ್ರೀಂ'ದನಿ ನಾಲ್ಕುಸುತ್ತು
ಮೊಳಗಲಾಗ ಬಂದ ನೊಬ್ಬ
ಸರಾಫಗವ ಕೆಟ್ಟಶತ್ರು!

ಕಂಡವನ ಸರಾಫ ಬೆದರಿ
ಕತ್ತೆಯನ್ನು ಬಳಿಗೆ ಕರೆದ
"ಓಡಿ ಹೋಗಬೇಕು, ಬೇಗ
ಬಾ ಬಾ" ಎಂದೊರೆದ ಮೊರೆದ.

"ಆವ ಬಂದರೆ ನನಗೇನಿದೆ?
ನಿನಗಿಂತವ ಭಾರವೇನು?
ನಿನಗೆ ಶತ್ರು ನನಗೇನಿದೆ?
ಹೆದರಲೇಕೆ–ಕತ್ತೆ ನಾನು.



# ಮುಖಚಿತ್ರ

ಹಿಡಿಂಬ ವನದಲ್ಲಿ ಸ್ವಲ್ಪಕಾಲವಿದ್ದಮೇಲೆ ಕುಂತಿಯೂ ಪಾಂಡವರೂ ಅಲ್ಲಿಂದ ಹೊರಟರು. ಮುಂದೆ ಏಕಚಕ್ರಪುರವೆಂಬ ಗ್ರಾಮವನ್ನು ಸೇರಿ, ಅಲ್ಲಿ ತಮ್ಮ ವಾಸಕ್ಕೆ ಒಬ್ಬ ಬ್ರಾಹ್ಮಣನ ಮನೆಯನ್ನು ಗೊತ್ತುಮಾಡಿಕೊಂಡರು.

ಒಂದು ದಿನ ಆ ಮನೆಯವರೆಲ್ಲ ತುಂಬಾ ದುಃಖಿಸುತ್ತಿದ್ದರು. ಕುಂತಿ ವಿಚಾರಿಸಿದಾಗ ಈ ಕಥೆ ತಿಳಿಯಿತು.

ಆ ಊರಿನ ಬಳಿಯ ಅರಣ್ಯದಲ್ಲಿ ಬಕಾಸುರನೆಂಬ ರಾಕ್ಷಸನಿದ್ದನಂತೆ. ಅವನು ದಿನಾ ಊರೊಳಗೆ ಬಂದು ಸಿಕ್ಕಸಿಕ್ಕವರನ್ನೆಲ್ಲಾ ತಿಂದುಹಾಕುತ್ತಿದ್ದನಂತೆ. ಅದಕ್ಕಾಗಿ ಊರವರೆಲ್ಲಾ ಒಟ್ಟಿಗೆ ಸೇರಿ, ದಿನಾ ಒಂದೊಂದು ಮನೆಯಿಂದ ಒಬ್ಬೊಬ್ಬ ಆಳನ್ನು, ಒಂದು ಬಂಡಿ ಆಹಾರ ಪದಾರ್ಥಗಳೊಂದಿಗೆ ಅವನಿಗೆ ಕಳುಹಿಸಿಕೊಡುವುದಾಗಿ ಒಪ್ಪಂದ ಮಾಡಿಕೊಂಡರಂತೆ. ನಾಳೆ ಆ ಮನೆಯವರ ಸರತಿಯಂತೆ.

ಇವನ್ನು ತಿಳಿದು ಕುಂತಿ—"ನೀವೇನೂ ಹೆದರಬೇಡಿ. ನನಗಿರುವ ಐದುಮಂದಿ ಮಕ್ಕಳಲ್ಲಿ ಒಬ್ಬನನ್ನು ಕಳಿಸುತ್ತೇನೆ. ಉಳಿದುದೆಲ್ಲಾ ಸಿದ್ಧಮಾಡಿ" ಎಂದು ಒತ್ತಾಯದಿಂದ ಅವರನ್ನು ಒಪ್ಪಿಸಿದಳು.

ಇದನ್ನು ಕೇಳಿ ಭೀಮನಿಗೆ ಬಹಳ ಸಂತೋಷವಾಯಿತು—ತನಗೆ ಒಂದು ಬಂಡಿ ಆಹಾರ ಸಿಕ್ಕುವುದಲ್ಲಾ ಎಂದು. ಮರುದಿನ ಆಹಾರದ ಬಂಡಿಯಲ್ಲಿ ಭೀಮನೇ ಕುಳಿತು ಕಾಡಿಗೆ ಹೊರಟ. ಅದರಲ್ಲಿದ್ದ ಬಗೆಬಗೆಯ ಭಕ್ಷ್ಯಭೋಜ್ಯಗಳನ್ನು ರುಚಿನೋಡುತ್ತಾ ಹೊರಟ. ಕಾಡಿನ ಬದಿಯಲ್ಲಿ ಬಂಡಿಯನ್ನುಬಿಟ್ಟು, ಒಂದು ಕೆರೆಯ ಬದಿಯಲ್ಲಿ ಆಹಾರ ಪದಾರ್ಥಗಳನ್ನು ಬಡಿಸಿಕೊಳ್ಳುತ್ತಾ ಪೂರಾ ಖಾಲಿಮಾಡಿದ.

ಇನ್ನೂ ಏಕೆ ಆಹಾರದ ಬಂಡಿ ಬರಲಿಲ್ಲವೆನ್ನುತ್ತಾ ಬಕಾಸುರನು ಅಲ್ಲಿಗೆ ಬಂದ. ತನ್ನ ಆಹಾರವನ್ನೆಲ್ಲಾ ತಿನ್ನುತ್ತಿರುವ ಭೀಮನನ್ನು ನೋಡಿ ಅವನಿಗೆ ಬಂದ ಸಿಟ್ಟನ್ನೇನು ಹೇಳೋಣ! ಓಡಿಬಂದು ಭೀಮನ ಬೆನ್ನಿಗೆ ಗುದ್ದಿದ. ಭೀಮನು ಥರ್ರನೆ ತೇಗಿ, ಉಳಿದ ಕಡೆಯ ತುತ್ತನ್ನೂ ಬಾಯೊಳಗೆ ಹಾಕಿಕೊಂಡು ನುಂಗಿ ಕೈಯುಜ್ಜಿಕೊಳ್ಳುತ್ತಾ, "ಓಹೊ! ನೀನೆ ಬಕಾಸುರನೋ!" ಎನ್ನುತ್ತಾ ಸಡ್ಡು ಹೊಡೆದು ಅವನಮೇಲೆ ತಿರುಗಿಬಿದ್ದ.

ಬಕ–ಭೀಮರಿಗೆ ಘನಘೋರ ಮಲ್ಲಯುದ್ಧ ನಡೆಯಿತು. ಸುತ್ತಮುತ್ತಲಿದ್ದ ಮರಗಳೂ ದಿಣ್ಣೆಗಳೂ ನೆಲಸಮವಾಗಿ ಹೋದುವು. ಕಡೆಗೆ ಭೀಮನು ಬಕಾಸುರನನ್ನು ಸೀಳಿ ಬಿಸುಟನು. ಮುಗಿಯಿತು ಊರ ಹೆಮ್ಮಾರಿಯಾದ ಆ ಬಕಾಸುರನ ಕತೆ.



# ನರ-ವಾನರ

ಬ್ರಹ್ಮದತ್ತನು ಕಾಶಿನಗರವನ್ನು ಪಾಲಿಸುವ ಕಾಲದಲ್ಲಿ ಬೋಧಿಸತ್ವನು ಕಪಿರೂಪದಲ್ಲಿ ಜನ್ಮತಾಳಿ ಹಿಮಾಲಯ ಪರ್ವತ ಶ್ರೇಣಿಯ ಒಂದು ವೃಕ್ಷದಮೇಲೆ ವಾಸಮಾಡುತಿದ್ದನು.

ಜನ್ಮತಃ ವಾನರನೇ ಆದರೂ ನರರಲ್ಲಿ ಕಾಣಬರುವ ಸುಗುಣಗಳು ಆ ಕೋಡಗನಲ್ಲಿ ಕಂಡು ಬರುತಿತ್ತು. ಆ ವಾನರ ತುಂಬಾ ಒಳ್ಳೆಯದು. ಆ ಅರಣ್ಯದಲ್ಲಿದ್ದ ಪ್ರತಿ ಪ್ರಾಣಿಯೂ ತನ್ನ ಕಷ್ಟಸುಖವನ್ನು ಅದರ ಮುಂದೆ ತೋಡಿಕೊಂಡು ಸೂಕ್ತ ಸಲಹೆಗಳನ್ನು ಪಡೆಯಲು ಆ ವಾನರವನ್ನು ಆಶ್ರಯಿಸುತಿತ್ತು.

ನಿಜ ಹೇಳಬೇಕೆಂದರೆ ಆ ವಾನರನ ಹಿತೋಕ್ತಿಯನ್ನು ಕೇಳಿದ ತರುವಾಯ ವನ ಮೃಗಗಳು ತಮ್ಮ ಕ್ರೂರ ಸ್ವಭಾವವನ್ನು ತ್ಯಜಿಸಿ, ಸಾಧು ಪ್ರಾಣಿಗಳಾಗುತ್ತಿದ್ದವು. ಅಷ್ಟೇ ಅಲ್ಲ. ಪ್ರತಿ ಪ್ರಾಣಿಯೂ ಮುಂಜಾನೆ ಗಂಗಾನದಿಯಲ್ಲಿ ಸ್ನಾನಮಾಡಿ ಒಂದೊಂದು ಸಿಹಿಫಲವನ್ನು ತಂದು ಆ ಮಹಾ ಕಪಿಗೆ ಗುರುದಕ್ಷಿಣೆಯಾಗಿ ಸಲ್ಲಿಸುತಿತ್ತು.

ಕಾಡುಮೃಗಗಳಿಗೆಲ್ಲಾ ಆಸರೆಯಾಗಿದ್ದ ಆ ಕಪಿಗೆ ಒಂದುದಿನ "ಅಯ್ಯೋ ಸತ್ತೆ, ಸತ್ತೆ" ಎಂಬ ಆರ್ತನಾದ ಕೇಳಿಸಿತು.

ಕೂಡಲೇ ಆ ಕಪಿ "ಇದೋ ಬಂದೆ, ಬರುತ್ತಿದ್ದೇನೆ" ಎಂದು ಕೂಗುತ್ತಾ ಆ ಶಬ್ದ ಬಂದ ದಿಕ್ಕಿಗೆ ಓಡಿತು.

ಒಂದು ಮರ. ಆ ಮರದ ಬುಡದಹತ್ತಿರ ಹೊಲಸಾದ ಒಂದು ಗುಂಡಿ. ಅದು ತುಂಬಾ ಆಳವಾಗಿತ್ತು. ಅದರಿಂದ ತಡೆಯಲಸಾಧ್ಯವಾದ ದುರ್ವಾಸನೆ ಹೊರಡುತಿತ್ತು. ಅದರಲ್ಲಿ ಒಬ್ಬ ಮನುಷ್ಯ ಬಿದ್ದು, ಮೇಲಕ್ಕೆ ಏಳಲಾರದೆ ಅವಸ್ಥೆಪಡುತ್ತಿದ್ದಾನೆ.

ಅವನ ಒದ್ದಾಟ ಕಂಡು ಕಪಿಯ ಹೃದಯ ನೀರಾಯಿತು. ಕಂಬನಿ ಮಿಡಿಯಿತು.

"ಹೆದರಬೇಡ. ನಾನಿದ್ದೇನೆ" ಎನ್ನುತ್ತಾ ಕ್ಷಣವಾದರೂ ತಡೆಮಾಡದೆ ಆ ಗುಂಡಿ

ಯಚ್. ನಾರಾಯಣ ರಾವ್



ಯೊಳಕ್ಕೆ ಹಾರಿತು. ಆ ಮನುಷ್ಯನನ್ನು ತನ್ನ ಬೆನ್ನಮೇಲೇರಿಸಿಕೊಂಡು ಗಕನೆ ಒಂದು ನೆಗತ ನೆಗೆದು ಅವನನ್ನು ಮೇಲಕ್ಕೆ ಕರೆ ತಂದಿತು.

ಅವನನ್ನು ನೆಲದಮೇಲೆ ಮಲಗಿಸಿ, ತಿನ್ನಲು ಕೆಲವು ಫಲಗಳನ್ನು ತಂದು ಕೊಟ್ಟಿತು. ಸಮೀಯದಲ್ಲಿದ್ದ ವನದಿಂದ ಕೆಲವು ಮೂಲಿಕೆ ಗಳನ್ನು ತಂದು, ಅವನ ಗಾಯಗಳಿಗೆ ಹಾಕಿ ಕಟ್ಟುಕಟ್ಟಿತು.

ಈ ರೀತಿ ಉಪಚಾರ ಮಾಡಿದಕೂಡಲೇ ಆ ಮನುಷ್ಯನಿಗೆ ನೋವು ಕಡಿಮೆಯಾಗಿ ಸುಖವಾಗಿ ನಿದ್ದೆಮಾಡಿದ.

ಸ್ವಲ್ಪ ಹೊತ್ತು ಗಾಢನಿದ್ರೆ ಮಾಡಿದ ನಂತರ ಅವನಿಗೆ ಎಚ್ಚರವಾಯಿತು. ಪಕ್ಕದಲ್ಲಿ ತನ್ನನ್ನು ಬಹು ಜಾಗರೂಕತೆಯಿಂದ ನೋಡಿ ಕೊಳ್ಳುತ್ತಾ ಕುಳಿತಿದ್ದ ಕಪಿಯನ್ನು ನೋಡಿದ. ಕೂಡಲೇ ಅವನ ಹೃದಯದಲ್ಲಿ ಅನೇಕ ಉಹಾತರಂಗಗಳೆದ್ದವು.

ಅವನು "ಎಲೈ ಕಪಿಯೇ, ಬಹು ಶ್ರಮ ಗೊಂಡು ನನ್ನನ್ನು ಹೊತ್ತು ತಂದು ನೀನು ಬಳಲಿರುವೆ. ತುಸ ಹೊತ್ತು ನೀನು ನಿದ್ದೆ ಮಾಡು. ಬಳಲಿಕೆ ಪರಿಹಾರವಾಗುವುದು" ಎಂದು ಹೇಳಿದ.

ಅವನ ಮಾತುಗಳನ್ನು ನಂಬಿ ಆ ಘನ ಶಾಲೀ ಕಪಿ ಹಾಗೇ ಕಣ್ಣು ಮುಚ್ಚಿಕೊಂಡು ನಿದ್ದೆಮಾಡಿತು.

ತನ್ನನ್ನು ನಂಬಿ ಕಪಿ ನಿದ್ದೆಮಾಡಿದ ಕೂಡಲೇ, "ಈ ಕೋತಿಯನ್ನು ಕೊಂದು ಇದರ ಮಾಂಸ ತಿನ್ನಬೇಕು" ಎಂಬ ದುರು ದ್ದೇಶ ಜನಿಸಿತು ಅವನ ಮನಸ್ಸಿನಲ್ಲಿ.

ಈಗತಾನೇ ತನಗೆ ಜೀವದಾನಮಾಡಿದು ದನ್ನು ಮರೆತುಬಿಟ್ಟ. ಆ ಕಪಿ ಮಾಡಿದ ಸಹಾಯವನ್ನು ನೆನೆಯದ ಕೃತಘ್ನನವನು. ಪರಮ ನೀಚ.

ಅವನು ಕೂಡಲೇ ಒಂದು ದೊಡ್ಡ ಬಂಡೆ ಯನ್ನು ಹೊತ್ತುತಂದು ಮಲಗಿದ್ದ ಕಪಿಯ ಮೇಲೆ ಎತ್ತಿ ಹಾಕಿದ.

ಆದರೆ ಪುಣ್ಯಕಾಲ! ಗುರಿತಪ್ಪಿ ಆ ಕಲ್ಲು ತುಸ ದೂರಹೋಗಿ ಬಿತ್ತು. ನಿಶ್ಚಿಂತೆಯಿದ ಮಲಗಿದ್ದ ಕಪಿಗೆ ಯಾವಅಪಾಯವೂ ಆಗಲಿಲ್ಲ. ಕಲ್ಲು ಕೆಳಗೆಬಿದ್ದಕೂಡಲೇ, ಭಾರಿ



ಶಬ್ದವಾಯಿತು. ಕಪಿಗೆ ಎಚ್ಚರವಾಯಿತು. ಕಪಿ ಎಚ್ಚಗೊಂಡಿರುವುದನ್ನು ನೋಡಿ, ಆ ದುರ್ಮಾರ್ಗನ ಹೃದಯದಲ್ಲಿ ತಳಮಳವೆದ್ದಿತು. ಅವನ ಮುಖ ಬಿಳಿಚಿಕೊಂಡಿತು.

ಎಚ್ಚರಗೊಂಡ ಕಪಿ ಅವನ ಮುಖ ನೋಡಿತು. ಅವನ ದ್ರೋಹವನ್ನು ಸಾರಲು ಬೇರೆ ಯಾವಸಾಕ್ಷ್ಯವೂ ಬೇಕಾಗಿರಲಿಲ್ಲ.

ಆದರೆ ಕಪಿಮಾತ್ರ ತುಸವಾದರೂ ಉದ್ವೇಗಹೊಂದಲಿಲ್ಲ. ಈಗಾಗಲೇ ಅರ್ಧ ಸತ್ತಿರುವವನ ಮೇಲೆ ಕೈಮಾಡುವುದು ದೊಡ್ಡಸ್ಥಿಕೆಯಲ್ಲವೆಂದು ಯೋಚಿಸಿ, ಅವನನ್ನು ದುರುಗುಟ್ಟಿಕೊಂಡು ನೋಡಿತು. ಆ ನೋಟವೇ ಸಾಕಾಯಿತು. ಅವನು ಮತ್ತಷ್ಟು ಗೊಂದಲದಲ್ಲಿ ಬಿದ್ದ.

ಆ ಮಹಾಕಪಿಯ ರೂಪದಲ್ಲಿದ್ದ ಬೋಧಿಸತ್ವನು ಎದ್ದುಕುಳಿತು ಅವನಿಗೆ ಹೀಗೆ ಹಿತವಚನ ನುಡಿದ:

"ಅಣ್ಣಾ, ನಾನು ನಿನಗೆ ಹಾನಿಮಾಡುವೆನೆಂದು ಹೆದರಬೇಡ. ಆದರೆ ನೀನು ನನಗೆ ಮಾಡಬೇಕೆಂದಿದ್ದ ದ್ರೋಹ ಇಲ್ಲಿರುವ ಪ್ರಾಣಿಗಳಿಗೆ ತಿಳಿದರೆ, ನಿನ್ನನ್ನು ಅವು ಉಳಿಸುವುದಿಲ್ಲ. ಅವು ಇಲ್ಲಿಗೆ ಬರುವಮೊದಲೇ ನಿನ್ನನ್ನು ಈ ಅರಣ್ಯದಾಚೆ ಸೇರಿಸುವೆನು. ಹೆದರದೆ ನನ್ನೊಂದಿಗೆ ಬಾ"

ಎಂದು ಅವನನ್ನು ಅಡವಿಯ ಆಚೆ ಕರೆತಂದು ಬಿಟ್ಟು ಆ ಮಹಾಕಪಿ ತನ್ನ ಸ್ಥಾನವನ್ನು ಸೇರಿಕೊಂಡಿತು.




ದ್ರೋಹಚಿಂತನೆಯ ಕೆಟ್ಟಫಲವೋ ಎಂಬಂತೆ, ಮುಂದೆ ಅವನಿಗೆ ಏನೂ ಒಳ್ಳೆಯದಾಗಲಿಲ್ಲ. ಅಡವಿ ದಾಟಿಹೋದ ಕೆಲವು ದಿನಗಳಿಗೆಲ್ಲಾ ಅವನು ತಾನು ಮಾಡಿದ ಪಾಪ ಕಾರ್ಯಗಳ ಫಲವಾಗಿ ಅನೇಕ ಕಷ್ಟಕೋಟಲೆಗಳಿಗೆ ಗುರಿಯಾದ.

ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಅವನನ್ನು ಮನೆಯಿಂದ ಓಡಿಸಿದರು. ಬಂಧುಮಿತ್ರರು ದೂರಸರಿದರು. ತೀರಾ ಉತ್ಕಟ ಪರಿಸ್ಥಿತಿ ಒದಗಿದುದರಿಂದ ಅವನು ಆ ಊರು ಬಿಟ್ಟು ನಿರ್ಗತಿಕನಾಗಿ ಹೋಗಲೇಬೇಕಾಗಿ ಬಂತು. ಅವನು ಮಾಡಿದ ಪಾಪಕಾರ್ಯಕ್ಕೆ ತಕ್ಕ ಶಿಕ್ಷೆ ಆಯಿತು. ಮಿತ್ರದ್ರೋಹಿಗಳಿಗೆ ಎಂದಿಗಾದರೂ ಈಗತಿ ಬಂದೇ ಬರುತ್ತದೆ.





# ವ ನ ಭೂ ಷ ಣ

ಮಾನವರಲ್ಲಿ ಸುಶ್ರಾವ್ಯವಾಗಿ ಹಾಡಿ ಆನಂದಪಡಿಸುವ ಸಂಗೀತಗಾರರಿದ್ದಾರೆ ; ನಗಿಸುವ ವಿದೂಷಕರಿದ್ದಾರೆ. ಈ ಎರಡು ಕಾರ್ಯಗಳನ್ನೂ ಮಾಡಬಲ್ಲ ಪಕ್ಷಿಯೊಂದು ಇದೆ ಎಂದರೆ ಕೇಳಲು ಆಶ್ಚರ್ಯವಾಗುವುದಿಲ್ಲವೇ?

ಅಮೇರಿಕಾದೇಶದ ಅರಣ್ಯಗಳಲ್ಲಿ ಬಣ್ಣಬಣ್ಣದ ಪಕ್ಷಿಯೊಂದಿದೆ. ಅದು ನೋಡಲು ಸುಂದರವಾಗಿರುತ್ತದೆ. ಸೊಗಸಾಗಿ ಹಾಡುತ್ತದೆ. ಅದರ ಕಂಠಸ್ವರ ತುಂಬಾ ಇಂಪಾಗಿ, ಗಂಭೀರವಾಗಿಯೂ, ಸ್ಪಷ್ಟವಾಗಿಯೂ ಇರುತ್ತದೆ. ಅರ್ಧರಾತ್ರಿಗೆ ಪ್ರಾರಂಭಿಸಿ ಮುಂಜಾನೆಯ ತನಕ ಹಾಡುತ್ತಲೇ ಇರುವುದು. ಅದಕ್ಕೆ ಉತ್ಸಾಹ ಉಂಟಾದರೆ ಬಾಲ ಮತ್ತು ರೆಕ್ಕೆಗಳನ್ನು ಅಗಲಿಸಿ ಗಾನಮಾಡುತ್ತಾ ನರ್ತಿಸುವುದು. ಅನೇಕ ಪಕ್ಷಿಗಳು ಒಟ್ಟಾಗಿ ಹಾಡುವಂತೆ ಭಾಸವಾಗುವುದು. ಈ ಪಕ್ಷಿಗೆ "ವನ ಭೂಷಣ" ವೆಂದು ಅಮೇರಿಕಾ ದೇಶದವರು ಬಿರುದು ಕೊಟ್ಟಿದ್ದಾರೆ.



ಹಾಡುವುದುಮಾತ್ರವಲ್ಲ; ಇತರ ಪಕ್ಷಿಗಳನ್ನು ರೇಗಿಸಿ ಹಾಸ್ಯಮಾಡುವುದೂ ಉಂಟು. ಒಂದು ಸಲ ಗಿಡಗನಂತೆ ಕೂಗುವುದು. ಇದನ್ನು ಕೇಳಿ ಸಣ್ಣ ಪುಟ್ಟ ಪಕ್ಷಿಗಳೆಲ್ಲಾ ಭಯಪಟ್ಟು ಬಚ್ಚಿಟ್ಟುಕೊಳ್ಳುತ್ತವೆ. ಇನ್ನೊಂದು ಸಲ ಹೆಣ್ಣುಹಕ್ಕಿ ಗಂಡು ಪಕ್ಷಿಯನ್ನು ಕರೆಯುವಂತೆ ನಟಿಸುವುದು. ಈ ಶಬ್ದ ಕೇಳಿ ಗಂಡುಹಕ್ಕಿ ಗೂಡಿನಿಂದ ಹೊರಗೆ ಬಂದು ಜೊತೆಪಕ್ಷಿಯನ್ನು ಕಾಣದೆ ಮೋಸಹೋಗುವುದು. ಆದುದರಿಂದಲೇ ಈ ಪಕ್ಷಿಗೆ "ಪರಿಹಾಸಪಕ್ಷಿ" ಎಂಬ ಹೆಸರು ಸಾರ್ಥಕವಾಗುತ್ತದೆ. ಇದು ಬಗೆಬಗೆಯ ಜಂತುಗಳ, ಪಕ್ಷಿಗಳ ಕಂಠಸ್ವರವನ್ನು ಅನುಕರಿಸಬಲ್ಲದು. ಇದರಿಂದ ಬೇಟೆಗಾರರು ಅನೇಕಸಾರಿ ಮೋಸಹೋಗುವುದುಂಟು.

ಈ ಪಕ್ಷಿಗೆ ನಾಗರಹಾವು ಜನ್ಮಶತ್ರು. ಇದರ ಮರಿಗಳನ್ನು ತಿನ್ನಲು ಹಾವು ಸರಸರನೆ ಗೂಡಿಗೆ ಹೋಗುವುದು. ಆದರೆ ಈ ಪರಿಹಾಸಪಕ್ಷಿ ಸುಮ್ಮನಿರುವುದಿಲ್ಲ ; ಕೊಕ್ಕಿನಿಂದ ಕುಟುಕುವುದು. ರೆಕ್ಕೆಗಳಿಂದ ಬಡಿಯುವುದು. ಉಗುರುಗಳಿಂದ ಪರಚುವುದು. ಹಾವು ಕದಲದೆ ಬಿದ್ದಿದ್ದರೂಸಹ ಅದನ್ನುಮೇಲಕ್ಕೆ ಎತ್ತಿ ಕೊಂಡು ಹೋಗಿ ಕೆಳಕ್ಕೆಸೆದು ಸೇಡು ತೀರಿಸಿಕೊಳ್ಳುವವರೆವಿಗೂ ಸುಮ್ಮನಿರುವುದಿಲ್ಲ.




[ಗಿರಿಕೋಟೆ ಸೇರಿಕೊಂಡ ವಿಜಯನು ಅಲ್ಲಿ ತನ್ನ ತಂದೆಯ ಮರಣದ ವೃತ್ತಾಂತವನ್ನು ತಿಳಿಯಲು ಪ್ರಯತ್ನಿಸುವನು. ಆದರೆ ಆತನ ಪ್ರಾಣಕ್ಕೆ ಸಂಚಕಾರ ಒದಗುವುದು. ಇದನ್ನು ಅರಿತ ಕರುಣ ಆತನನ್ನು ಎಚ್ಚರಿಸುವಳು. ವಿಜಯನು ಕರುಣಳನ್ನು ಅಲ್ಲಿಯೇ ಬಿಟ್ಟು ಪ್ರಾಣ ಉಳಿಸಿಕೊಂಡು ಹೊರಬೀಳುವನು. ಮುಂದೆ ಓದಿ—]

ವಿಜಯನು ಭೀಮವರ್ಮನ ಕೈಯಿಂದ ತಪ್ಪಿಸಿಕೊಂಡು ನಾಲ್ಕು ತಿಂಗಳ ಮೇಲಾಯಿತು. ಈ ನಾಲ್ಕು ತಿಂಗಳಲ್ಲಿ ವಿಜಯಲಕ್ಷ್ಮಿಯು ಬೀಸಲ್ಪೂರು, ಕೋಸಲ್ಪೂರು ರಾಜ್ಯಗಳ ನಡುವೆ ಐದಾರುಸಾರಿ ಕೈ ಬದಲಾಯಿಸಿದಳು. ಈಗ ಕೋಸಲ್ಪೂರಿನವರ ಕೈ ಮೇಲಾಗಿತ್ತು. ಆದುದರಿಂದ ಭೀಮವರ್ಮನು ತುಂಬಾ ಉಲ್ಲಾಸದಿಂದಿದ್ದನು.

ಆತನು ಕೋಸಲ್ಪೂರು ರಾಜ್ಯಕ್ಕೆ ಸೇರಿದ ಕೆಲವುಮಂದಿ ಸರದಾರರೊಂದಿಗೆ ನರ್ಮದಾ ನದಿ ತೀರದಲ್ಲಿದ್ದ ದೇವಪುರದಲ್ಲಿ ತಂಗಿದ್ದನು. ಅದೇ ದೇವಪುರಕ್ಕೆ ತುಸ ದೂರದಲ್ಲಿ ಪಾಳು ಬಿದ್ದ ಛತ್ರವೊಂದಿತ್ತು. ಅಲ್ಲಿ ಹತ್ತುಹನ್ನೆರಡು ಜನ ಧನುರ್ಧಾರಿಗಳು ತಮ್ಮ ತಮ್ಮಲ್ಲಿ ಏನೇನೋ ಮಾತಾಡಿಕೊಳ್ಳುತ್ತಿದ್ದರು. ಆಗ ಅರ್ಧರಾತ್ರಿಯ ಸಮಯವಾಗಿತ್ತು.

ಇಷ್ಟರಲ್ಲಿ ಒಬ್ಬ ದೂತನು ಬಂದು ಅವರೆಲ್ಲರ ನಡುವೆ ಕುಳಿತಿದ್ದ ಒಬ್ಬ ಯುವಕನನ್ನು ಕುರಿತು, "ವಿಜಯ, ಭೀಮವರ್ಮನು ನಾಲ್ವರು ಸೈನಿಕರೊಂದಿಗೆ ಈಗಲೇ ಎಲ್ಲಿಗೋ ಹೊರಟಿದ್ದಾನೆ" ಎಂದು ಹೇಳಿದ.

ತಕ್ಷಣ ವಿಜಯನು ತಟಕ್ಕನೆ ಎದ್ದು ನಾಲ್ಕೈದು ಜನರೊಂದಿಗೆ ಆ ದೂತನನ್ನು ಹಿಂಬಾಲಿಸಿದನು.



ಆ ದೂತನು ಅವರನ್ನು ನರ್ಮದಾ ನದೀ ತೀರದ ಅಂಚಿನಲ್ಲಿಯೇ ಕರೆದೊಯ್ಯುತ್ತಿದ್ದ. ಕೊಂಚದೂರ ಹೋದ ತರುವಾಯ ಅವರಿಗೆ ತಮ್ಮ ಮುಂದೆ ಪಂಜಿನ ಬೆಳಕಿನಲ್ಲಿ ನಡೆಯುತ್ತಿದ್ದ ಒಂದು ಸಣ್ಣ ಗುಂಪು ಕಾಣಿಸಿತು.

ಅದು ಭೀಮವರ್ಮನ ಪಕ್ಷದವರಿರಬೇಕೆಂದು ಊಹಿಸಿದರು. ಆ ಗುಂಪು ಸ್ವಲ್ಪ ದೂರ ಹೋಗಿ ನದಿಯ ದಡದಲ್ಲಿ ಪೊದೆಗಳು ದಟ್ಟವಾಗಿದ್ದ ಸ್ಥಳದಲ್ಲಿ ನಿಂತಿತು.

ವಿಜಯವರ್ಮನೂ ಸಹ ತನ್ನ ಅನುಚರರೊಂದಿಗೆ ಮತ್ತೊಂದುಕಡೆ ಪೊದೆಗಳ ಹಿಂದೆ ಅವಿತಿಟ್ಟುಕೊಂಡು ಮುಂದೆ ನಡೆಯುವ ಸಂಘಟನೆ ಗಳನ್ನು ನೋಡಲು ಕಾತುರನಾಗಿದ್ದನು.

ಸ್ವಲ್ಪಸಮಯ ಕಳೆದಮೇಲೆ ಪೊದೆಯ ಆಚೆ ಕಡೆಯಿಂದ ಇನ್ನೊಂದು ಗುಂಪು ಈ ಕಡೆಗೆ ಬರುತ್ತಿರುವುದು ಕಾಣಿಸಿತು. ಎರಡು ಗುಂಪಿನ ನಾಯಕರ ಮಧ್ಯೆ ಮೊದಲು ಕುಶಲ ಪ್ರಶ್ನೆಗಳಾದ ತರುವಾಯ ಏನೋ ಗಹನ ವಿಷಯಚರ್ಚಿಸುತ್ತಿರುವಂತೆ ತೋರಿತು.

ಅವರಾಡುತ್ತಿದ್ದ ಮಾತುಗಳು ಎಲ್ಲಾ ವಿಜಯನಿಗೆ ಕೇಳಿಸುತ್ತಿರಲಿಲ್ಲ. ಆದರೆ ಎಲ್ಲೋ ಕೆಲವು ಮಾತುಗಳು ಅವನ ಕಿವಿಗೆ ಬಿದ್ದವು. 'ಕರುಣ ಎಲ್ಲ ರೀತಿಯಲ್ಲೂ ಅನುರೂಪಳಾದ ಹುಡುಗಿ... ಶಬ್ದವೇಧಿ... ಬಹಿರಂಗವಾಗಿ ಮಾಡಲು ಸಾಧ್ಯವಿಲ್ಲ..." ಮುಂತಾದ ಮಾತುಗಳು ಮಾತ್ರ ಆತನಿಗೆ ಕೇಳಿಸಿತು. ತುಸ ಹೊತ್ತಿಗೆಲ್ಲಾ ಅವರ ಚರ್ಚೆ ಮುಗಿಯಿತು. ಭೀಮವರ್ಮ ತನ್ನ ವಾಸದಕಡೆ ಹಿಂತಿರುಗಿದ. ವಿಜಯ ಆತನನ್ನು ಹಿಂಬಾಲಿಸಿದ.

ಭೀಮವರ್ಮನು ನರ್ಮದಾ ನದಿತೀರದಲ್ಲಿದ್ದ ಒಂದು ಪುರಾತನ ಭವನದಲ್ಲಿ ಇಳಿದುಕೊಂಡಿದ್ದ. ಆ ಭವನದ ಮೂರುಕಡೆಯೂ ಎತ್ತರವಾದ ಗೋಡೆಗಳಿದ್ದವು. ಮತ್ತೊಂದು ಕಡೆ ನರ್ಮದೆಯು ಪ್ರಹರಿಗೋಡೆಗಿಂತಲೂ ಭದ್ರವಾಗಿ ಆ ಭವನವನ್ನು ರಕ್ಷಿಸುತಿತ್ತು. ಆ ಭವನವನ್ನು ವಿಜಯವರ್ಮ ಅನೇಕಸಾರಿ ನೋಡಿದ್ದ; ಆದರೆ ಅದರೊಳಗೆ ಪ್ರವೇಶಿಸುವ ಅವಕಾಶ ಒದಗಿರಲಿಲ್ಲ.

ಆ ಎರಡು ಗುಂಪುಗಳಿಗೂ ನಡೆದ ಸಂಭಾಷಣೆಯಿಂದ ಕರುಣ ಈ ಭವನದಲ್ಲೇ ಇರಬೇ

ಕೆಂತಲೂ, ಆಕೆಗೆ ಬಲವಂತವಾಗಿ ವಿವಾಹ ಮಾಡುವ ಸಿದ್ಧತೆಗಳಾಗುತ್ತಿರುವುದೆಂದೂ ವಿಜಯನು ಊಹಿಸಿದ. ಕಾರ್ಯಮಿಂಚುವ ಮೊದಲೇ ತಾನು ಈ ಭವನದಮೇಲೆ ಧಾಳಿ ಮಾಡಿ, ಕರುಣಳನ್ನು ಈ ಸೆರೆಯಿಂದ ಬಿಡಿಸ ಬೇಕೆಂದು ನಿರ್ಧರಿಸಿದ.

ಆದುದರಿಂದ ಭೀಮವರ್ಮ ಮತ್ತು ಆತನ ಸೈನಿಕರು ಒಳಗೆ ಪ್ರವೇಶಿಸಿ ಸಿಂಹ ದ್ವಾರವನ್ನು ಮುಚ್ಚಿಕೊಂಡ. ತರುವಾಯ ಆತನು ಸುತ್ತು ಮುತ್ತು ತಿರುಗಾಡಿ ತಾನು ಧಾಳಿಮಾಡಲು ಯೋಗ್ಯವಾದ ಸ್ಥಳಕ್ಕಾಗಿ ಹುಡುಕಾಡುತ್ತಿದ್ದ.

ಕಾವಲು ಬಹಳ ಬಲವಾಗಿರುವುದರಿಂದ ಗೋಡೆ ದಾಟುವುದು ಸಾಧ್ಯವಿಲ್ಲವೆಂದೂ ನದಿಯ ಕಡೆಯಿಂದ ಧಾಳಿಮಾಡುವುದೇ ಉಚಿತವೆಂದೂ ತೀರ್ಮಾನಿಸಿ ಕೊಂಡ. ಈ ತೀರ್ಮಾನಕ್ಕೆ ಬಂದಮೇಲೆ ಸ್ವಲ್ಪವೂ ತಡಮಾಡದೆ ತನ್ನ ಅನುಚರರೊಂದಿಗೆ ತಾನು ಇಳಿದಿದ್ದ ಛತ್ರದಕಡೆಗೆ ಹೊರಟ.

ಆದರೆ ಅವರು ತಮ್ಮ ನಿವಾಸದೆಡೆ ಹೋಗುತ್ತಿರುವಾಗ ಕೆಲವರು ಅವರನ್ನು ಅಡ್ಡಗಟ್ಟಿದರು. ಭೀಮವರ್ಮನ ಪಕ್ಷದವರಿರಬೇಕೆಂದು ವಿಜಯನಕಡೆ ಯವರು ಭಾವಿಸಿದರು. ಕತ್ತಿಗಳನ್ನು ಹೊರತೆಗೆದು ಶತ್ರುಗಳಮೇಲೆ ಬಿದ್ದರು. ಈ ರೀತಿ ಉಭಯಪಕ್ಷದವರಿಗೂ ಸ್ವಲ್ಪಹೊತ್ತು ಕದನವಾದ ತರುವಾಯ ಅಕಸ್ಮಾತ್ತಾಗಿ ಅವರಿಗೆ ತಮ್ಮ ತಪ್ಪು ತಿಳಿಯಿತು.




ತನ್ನ ಎದುರಾಳಿ ಕರುಣಳನ್ನು ಸಾಕಿ ಸಲಹಿ ದೊಡ್ಡವಳನ್ನಾಗಿ ಮಾಡಿದ ಚಂದ್ರ ದುರ್ಗಾಧಿಪತಿ ಎಂದು ವಿಜಯನಿಗೆ ಆಗ ತಿಳಿಯಿತು. ಇಬ್ಬರಿಗೂ ಭೀಮವರ್ಮನೆಂದರೆ ಆಗದು. ಆದುದರಿಂದ ಇಬ್ಬರಲ್ಲೂ ಒಂದು ರೀತಿ ಸೌಹಾರ್ದ್ರವೇರ್ಪಟ್ಟಿತು.

ಮಾರನೇಯ ದಿನ ಎಲ್ಲ ವಿಷಯಗಳನ್ನೂ ವಿಶದವಾಗಿ ಚರ್ಚಿಸಿ ಕಾರ್ಯರೂಪಕ್ಕೆ ಬರೋಣವೆಂದು ಅವರು ತೀರ್ಮಾನಿಸಿ, ತಮ್ಮ ತಮ್ಮ ಶಿಬಿರದಕಡೆ ಹೊರಟು ಹೋದರು.

ಮಾರನೇಯದಿನ ಬೆಳಗ್ಗೆ ನರ್ಮದಾನದಿ ತೀರದಲ್ಲಿ ವಿಜಯನೂ ಚಂದ್ರದುರ್ಗಾಧಿಪತಿಯೂ ಭೇಟಿಮಾಡಿದರು. ಇಬ್ಬರಿಗೂ




ಬೀಮವರ್ಮನು ಶತ್ರುವಾಗಿದ್ದನು. ಆದುದರಿಂದ ಅವರಿಬ್ಬರಲ್ಲಿ ನಿಕಟಸ್ನೇಹ ಕುದುರಲು ಕಷ್ಟವೇನಿರಲಿಲ್ಲ. ಚಂದ್ರದುರ್ಗಾಧಿಪತಿಗೆ ವಿಜಯನಲ್ಲಿ ಅನುರಾಗ ಮತ್ತು ವಿಶ್ವಾಸಗಳು ಉಂಟಾಯಿತು.

ಇಬ್ಬರೂ ಸೇರಿ ಕರುಣಳನ್ನು ರಕ್ಷಿಸುವ ಉಪಾಯಗಳನ್ನು ಯೋಚಿಸಿದರು. ಕೊನೆಗೆ ಅಂದುರಾತ್ರಿಯೇ ನದಿಯಕಡೆಯಿಂದ ಭೀಮವರ್ಮನ ನಿವಾಸವನ್ನು ಮುತ್ತಲು ನಿರ್ಧರಿಸಿದರು. ಕರುಣಳನ್ನು ವಿಜಯನಿಗೆ ಕೊಟ್ಟು ವಿವಾಹಮಾಡಲು ಯಾವ ಅಭ್ಯಂತರವೂ ಇಲ್ಲವೆಂದು ಚಂದ್ರದುರ್ಗಾಧಿಪತಿ ಹೇಳಿದ.

ವಿಜಯನ ಪಡೆಯಲ್ಲಿ ಅಂಬಿಗ ಅಣ್ಣಯ್ಯನೆಂಬ ಮಧ್ಯವಯಸ್ಸಿನ ವ್ಯಕ್ತಿಯಿದ್ದ. ಅಣ್ಣಯ್ಯ ಹಡಗು ನಡೆಸುವುದರಲ್ಲಿ ತುಂಬಾ ಅನುಭವಸ್ಥ.

ವಿಜಯನು ತನ್ನ ನಿವಾಸಕ್ಕೆ ಬಂದು, ಅಣ್ಣಯ್ಯನನ್ನು ಕುರಿತು "ಅಣ್ಣಯ್ಯಾ ಇಂದುರಾತ್ರಿ ಎಲ್ಲಿಂದಲಾದರೂ ಒಂದು ದೊಡ್ಡ ಹಡಗನ್ನು ಅಪಹರಿಸಬೇಕು. ತುಸ ತುರ್ತು ಕಾರ್ಯವಿದೆ" ಎಂದ. ಅದಕ್ಕೆ "ಓ, ಅದೆಷ್ಟರಕೆಲಸ. ರೇವಿನಲ್ಲಿರುವ ಹಡಗುಗಳೆಲ್ಲಾ ನನ್ನದೆ" ಎಂದ ಅಣ್ಣಯ್ಯ.

ರೇವಿನಲ್ಲಿ ಅನೇಕ ಹಡಗುಗಳಿದ್ದವು. ಅವುಗಳಲ್ಲಿ ಒಂದೇ ಒಂದು ಹಡಗು ಇವರಕಾರ್ಯಕ್ಕೆ ಅನುಕೂಲವಾಗಿ ತೋರಿಬಂತು. ಅಣ್ಣಯ್ಯ ಈ ವಿಚಾರ ವಿಜಯನಿಗೆ ತಿಳಿಸಿದ. ಕತ್ತಲಾಗುವವೇಳೆಗೆ ಚಂದ್ರದುರ್ಗಾಧಿಪತಿ ತನ್ನ ಅನುಚರರೊಂದಿಗೆ ಅಲ್ಲಿಗೆಬಂದ. ವಿಜಯನೂ ಸಹ ತನ್ನ ಜನರೊಂದಿಗೆ ಸಿದ್ಧವಾದ.

ಮೊದಲು ಐದಾರುಜನ ಶಬ್ದಮಾಡದೆ ತೆವಳಿಕೊಂಡು ಹೋಗಿ ಹಡಗವನ್ನು ಹತ್ತಿದರು. ಅಲ್ಲಿ ಇಬ್ಬರು ಪಹರೆಯವರು ಕಾವಲು ಕಾಯುತ್ತಿದ್ದರು. ಅವರ ಬಾಯಲ್ಲಿ ಬಟ್ಟೆ ತುರುಕಿ, ಕೈಕಾಲುಗಳನ್ನುಕಟ್ಟಿ ಅವರನ್ನು ಎಲ್ಲಿಯೋ ದೂರದೆಡೆಗೆ ಸಾಗಿಸಿದರು ವಿಜಯನಕಡೆಯ ವೀರರು. ತರುವಾಯ ಚಂದ್ರದುರ್ಗಾಧಿಪತಿ ಮತ್ತು ವಿಜಯನ ಪರಿವಾರ ಬೇಗಬೇಗನೆ ಹಡಗು ಹತ್ತಿದರು. ಅಣ್ಣಯ್ಯ ಚುಕ್ಕಾಣಿ ಹಿಡಿದ. ಹಡಗು ಶರವೇಗದಿಂದ ನಡೆಯುತಿತ್ತು.

"ಮೋಡಕಲೆಯುತ್ತಿದೆ. ಶುಭಸೂಚನೆಗ ಳೇನೂ ಕಾಣಿಸುತ್ತಿಲ್ಲ" ಎಂದ ಆಕಾಶದಕಡೆ ನೋಡುತ್ತಾ ಅಣ್ಣಯ್ಯ. "ಹೌದು. ಬಿರು ಗಾಳಿ ಬೀಸುವಂತಿದೆ. ನಾವು ಹೊರಟ ಮುಹೂರ್ತ ಪ್ರಶಸ್ತವಾದುದಲ್ಲ ವೇನೋ" ಎಂದು ಅನುಮಾನ ಸೂಚಿಸಿದ ಚಂದ್ರ ದುರ್ಗಾಧಿಪತಿ. "ಏನಾಗುವುದೋ ನೋಡೋಣಬಿಡಿ" ಎಂದ ವಿಜಯ. ತುಫಾನು ಬಂದರೂ ಸರಿ, ಭೂಕಂಪವಾದರೂ ಸರಿ, ಹೇಗಾದರೂಮಾಡಿ ಕರುಣಳನ್ನು ಸೆರೆಯಿಂದ ಇಂದು ಬಿಡಿಸಲೇಬೇಕೆಂದು ನಿರ್ಧರಿಸಿಬಿಟ್ಟಿದ್ದ ವಿಜಯ.

ಕ್ಷಣಕ್ಷಣಕ್ಕೆ ಕತ್ತಲೂ ತೀವ್ರವಾಗುತ್ತಿದೆ. ಹಡಗು ಭೀಮವರ್ಮನ ನಿವಾಸದ ಸಮೀ ಪಕ್ಕೆ ಬರುವ ವೇಳೆಗೆ ಗಾಢಾಂಧಕಾರ ಆವರಿ ಸಿದೆ. ಸುತ್ತಮುತ್ತ ಪ್ರಶಾಂತತೆ ನೆಲಸಿತ್ತು. "ಇನ್ನೇನು ಬಂದೇಬಿಟ್ಟೆವು" ಎಂದ ವಿಜಯ. ಹಡಗು ಯಾವಾಗ ದಡವನ್ನುಮುಟ್ಟುವುದೋ ಯಾವಾಗ ಇಳಿಯೋಣವೋ ಎಂದು ವಿಜಯ ತಹತಹ ಪಡುತ್ತಿದ್ದ.

ಹೇಗಾದರೇನು? ಹಡಗು ಭವನದ ಹತ್ತಿರ ವಿರುವ ದಡವನ್ನುಸೇರಿತು. ವಿಜಯ ಮೊದಲು ಹಡಗಿನಿಂದ ಕೆಳಕ್ಕೆ ಹಾರಿದ. ಆತನ ಹಿಂದೆ ಇನ್ನೂ ಕೆಲವರು ಹಡಗಿನಿಂದ ಇಳಿದರು. "ಉಳಿದವರು ಹಡಗಿನಲ್ಲೇ ಇರಿ. ನಾವು ಹೋಗಿ ಸ್ಥಿತಿಗಳನ್ನು ತಿಳಿದುಕೊಂಡು ಬರು ತ್ತೇವೆ" ಎಂದ ಚಂದ್ರದುರ್ಗಾಧಿಪತಿ.




ಮತ್ತೆ ಇತರರು ಹಡಗಿನಲ್ಲೇ ಉಳಿದಿದ್ದರು. ಆಗಲೇ ಮೋಡಗಳು ಹೆಪ್ಪುಗಟ್ಟಿದಂತಾಯಿ ತು. ನಕ್ಷತ್ರಗಳು ಕಣ್ಣಿಗೆ ಕಾಣಿಸದಾದವು. ಅಕಸ್ಮಾತ್ತಾಗಿ ಬಿರುಗಾಳಿ ಎದ್ದಿತು. ವಿಜಯ ವರ್ಮನು ತನ್ನ ಪರಿವಾರದೊಂದಿಗೆ ಜಾಗರೂ ಕತೆಯಿಂದ ಮುಂದೆ ಸಾಗುತ್ತಿದ್ದ. ಭವನದ ಹಿಂಭಾಗವಾದುದರಿಂದ ಬಹಳ ಜನ ಸೈನಿಕ ರಿರಲಾರರೆಂದು ವಿಜಯನು ಭಾವಿಸಿದ್ದ.

ಇಷ್ಟರಲ್ಲಿ ಆತನ ಪರಿವಾರದವಲ್ಲೊಬ್ಬನು ದುರದೃಷ್ಟವಶಾತ್ ಒಂದು ಬಂಡೆಯಮೇಲೆ ಬೀಳಲು, ಅದು ಉರುಳುತ್ತಾಹೋಗಿ ಕೆಳಗೆ ಬಿತ್ತು.

ತತ್‌ಕ್ಷಣ ಭವನದ ಗೋಡೆಯಮೇಲಿಂದ ಒಂದು ಬಾಣ ರಿವ್ವನೆ ಬಂದು ಒಬ್ಬನ



ಪ್ರಾಣವನ್ನು ಬಲಿಗೊಂಡಿತು. "ಹಿಂದೆ ಸರಿಯಿರಿ" ಎಂದು ವಿಜಯನು ಆಜ್ಞಾಪಿಸು ವಷ್ಟರಲ್ಲಿ ಬಾಣಗಳ ಸುರಿಮಳೆಯಾಯಿತು. ಆತನ ಅನುಚರರು ಹಿಂದೋಡಿದರು.

ಇಷ್ಟರಲ್ಲಿ ಮಳೆ ಭೋರೆಂದು ಸುರಿಯಿತು. ತುಫಾನಿನ ಶಬ್ದ, ಹಿಂದಿರುಗಿ ಓಡುತ್ತಿದ್ದವರ ಕಿರಿಚಾಟ, ಅಟ್ಟಿಕೊಂಡು ಬರುತ್ತಿರುವವರ ಅರಚಾಟಗಳು ಸೇರಿ ಸನ್ನಿವೇಶ ತುಂಬಾ ಕೋಲಾಹಲಕರವಾಗಿತ್ತು.

ಹಾಗೂ ಹೀಗೂ ಮಾಡಿ ವಿಜಯ ಮತ್ತು ಆತನ ಪರಿವಾರ ತಾವು ಹಡಗು ನಿಲ್ಲಿಸಿದ್ದ ಸ್ಥಳವನ್ನು ಸಮೀಪಿಸಿದರು.

ಆದರೆ ಅಲ್ಲಿ ಹಡಗಿರಲಿಲ್ಲ. ಬಿರುಗಾಳಿಯ ದೆಸೆಯಿಂದ ಅದು ನದಿಯ ಮಧ್ಯಕ್ಕೆ ಹೊಡೆದು ಕೊಂಡು ಹೋಗಿಬಿಟ್ಟಿತ್ತು. ಅದನ್ನು ಮತ್ತೆ ದಡವನ್ನು ಸೇರಿಸಲು ಅಣ್ಣಯ್ಯನಿಗೆ ಸಾಧ್ಯ ವಾಗುತ್ತಿಲ್ಲ!

ಹಿಂದಿನಿಂದ ಶತ್ರುಗಳು ಅಟ್ಟಿಸಿಕೊಂಡು ಬರುತ್ತಿದ್ದಾರೆ. ಧಾರಾಕಾರವಾಗಿ ಮಳೆ ಸುರಿಯುತ್ತಿದೆ. ಬಿರುಗಾಳಿಯ ದೆಸೆಯಿಂದ ಒಂದು ಕಡೆ ನಿಲ್ಲಲು ಸಾಧ್ಯವಾಗುತ್ತಿಲ್ಲ. ಮಿಂಚಿನ ಪ್ರಕಾಶದಿಂದ ಶತ್ರುಗಳಿಗೆ ಗುರಿ ಬಹಳ ಚೆನ್ನಾಗಿ ಸಿಗುತ್ತಿದೆ.

ಆಲೋಚಿಸಲಾದರೂ ಅವರಿಗೆ ವ್ಯವಧಿ ಯಿರಲಿಲ್ಲ. ವಿಜಯ ಮತ್ತು ಆತನ ಪರಿವಾರ ಗಟ್ಟಿಮನಸ್ಸಿನಿಂದ ಸಾಹಸಕ್ಕೆ ಧುಮುಕಿದರು ನಿರ್ಭಯವಾಗಿ ನದಿಯಲ್ಲಿ ಹಾರಿದರು. ಹಡಗಿರುವ ಸ್ಥಳಕ್ಕೆ ಈಜಿಕೊಂಡು ಹೊರಟರು.

ಶತ್ರುಗಳು ದಡಕ್ಕೆಬಂದು ಈಜಿಕೊಂಡು ಹೋಗುತ್ತಿರುವವರಮೇಲೆ ಸಾಲು ಸಾಲಾಗಿ ಬಾಣಗಳನ್ನು ಬಿಡುತ್ತಿದ್ದರು. ಏಟುತಿಂದವರು 'ಹಾ' ಎಂದು ಕಿರಿಚುತ್ತಾ ಪ್ರವಾಹದ ಪಾಲಾಗುತ್ತಿದ್ದರು. ಹಡಗನ್ನೇರುತ್ತಿರುವಾಗ ಶತ್ರುಗಳ ಬಾಣಕ್ಕೆ ತುತ್ತಾಗಿ ಅನೇಕರು ನದಿಯಲ್ಲಿ ಬಿದ್ದು ಕೊಚ್ಚಿಕೊಂಡುಹೋದರು.

ಹಡಗಿನಲ್ಲಿದ್ದವರಲ್ಲಿ ಕೆಲವರಿಗೆ ಏಟು ತಾಕಿತು. ಆದರೂ ಸಹ ಅವರು ಧೈರ್ಯ ಗೆಡದೆ ತಮ್ಮ ಎದುರಾಳಿ ಗಳಮೇಲೆ ಬಾಣ ಗಳನ್ನು ಬಿಡಲು ಪ್ರಾರಂಭಿಸಿದರು. ನಿಕರ ಯುದ್ಧ ನಡೆಯಿತು. ಅಂತೂ ಭೀಮನವರ್ಮನ ಕಡೆಯವರದು ಮೇಲುಗೈ ಆಗಿತ್ತು.



ವಿಜಯುವರ್ಮನದಾಳಿ ಈರೀತಿ ಪರಿಣಾಮ ಗೊಂಡಿತು. ಪ್ರಾಣವುಳಿಸಿಕೊಂಡರೆ ಸಾಕೆಂದು ದೇವರಿಗೆ ಹರಿಕೆ ಹೊತ್ತರು. ತುಫಾನಿನ ಹೊಡೆತಕ್ಕೆ ಹಡಗು ತರಗೆಲೆಯಂತೆ ಅತ್ತಿತ್ತ ತೂಗಾಡುತ್ತಿತ್ತು. ಈ ಕ್ಷಣವೋ, ಮರು ಕ್ಷಣವೋ,ತಲೆಕೆಳಗಾಗುವಂತೆ ತೋರುತ್ತಿತ್ತು. ಹಡಗಿನಲ್ಲಿ ಹಾಹಾಕಾರವೆದ್ದಿತು.

"ಹಡಗನ್ನು ಅಚೆದಡಕ್ಕಾದರೂ ಸೇರಿಸಯ್ಯಾ ಅಣ್ಣಯ್ಯಾ" ಎಂದು ಉದ್ವಿಗ್ನನಾಗಿ ನುಡಿದ ವಿಜಯ. ಆದರೆ ಆ ಬಿರುಗಾಳಿಯಲ್ಲಿ ಹಡಗನ್ನು ಆಚೆದಡಕ್ಕೆ ಸೇರಿಸುವುದೇನು ಸಾಮಾನ್ಯವೇ?

ಇಷ್ಟರಲ್ಲಿ ಒಂದುಬಾಣ ಬಂದು ಚಂದ್ರ ದುರ್ಗಾಧಿಪತಿಗೆ ತಗುಲಿತು. ಗಾಯಗೊಂಡು ಕೆಳಗೆಬಿದ್ದಾತನನ್ನು ಒಳಗೆ ಹೊತ್ತುಕೊಂಡು ಹೋದರು.

ಗಾಯ ಜೋರಾಗಿಯೇ ಬಿದ್ದಿತ್ತು. ಪ್ರಾಣ ಭಯವೂ ಇದ್ದುದರಿಂದ ಆತನು ವಿಜಯನನ್ನು ಕೂಗಿದ. ವಿಜಯ ಚಿಂತಾಕ್ರಾಂತನಾಗಿ ಆತನನ್ನು ಸಮೀಪಿಸಿ ನಿಂತುಕೊಂಡ.

"ತಮ್ಮಾ, ನೀನು ಯಾವಪಕ್ಷದವನು? ಬಿಸಲೂರಿನೊ, ಅಥವಾ ಕೊಸಲೂರಿನೊ?" ಎಂದು ಕೇಳಿದ ಚಂದ್ರದುರ್ಗಾಧಿಪತಿ. "ಭೀಮವರ್ಮ ಕೊಸಲೂರಿನವನು. ಆತನು ಚಂಡಿದಾಸ ಮತ್ತು ನನಗೆ ಹಿತಶತ್ರು. ಆದುದರಿಂದ ನಾವು ಬಿಸಲೂರಿನವರೆಂದು ನೀವು ತಿಳಿಯಬಹುದು" ಎಂದ ವಿಜಯ.



ತಾನು ಇಂತಹ ದೇ ಪಕ್ಷಕ್ಕೆಸೇರಿದವನೆಂಬ ವಿಷಯ ವಿಜಯ ವರ್ಮನಿಗೆ ನಿರ್ದಿಷ್ಟವಾಗಿ ತಿಳಿಯದು!

"ಹಾಗಾದರೆ ಕೇಳು. ನಾನು ಕರುಣಳಿಗಾಗಿ ಇಲ್ಲಿಗೆ ಬರಲಿಲ್ಲ. ಅವಳು ಇಲ್ಲಿರುವುದೂ ಸಹ ನನಗೆ ತಿಳಿಯದು. ಶತ್ರುಗಳ ಬಲಾಬಲಗಳನ್ನು ತಿಳಿದುಕೊಂಡು ಹೋಗುವ ಸಲುವಾಗಿ ಬಂದೆ. ಆ ಕೆಲಸ ಸ್ವಲ್ಪಮಟ್ಟಿಗೆ ನೆರವೇರಿತು. ನಾನು ಪ್ರಾಣದಿಂದ ಉಳಿಯುವೆನೇ ಎಂಬ ಅನುಮಾನ ವುಂಟಾಗಿದೆ. ನಾನು ನಿನಗೊಬ್ಬ ವ್ಯಕ್ತಿಯ ಹೆಸರನ್ನು ಹೇಳುವೆನು. ನಾನು ಮರಣಿಸಿದಪಕ್ಷಕ್ಕೆ ನೀನು ಆ ವ್ಯಕ್ತಿಯ ಹತ್ತಿರ ಹೋಗಿ ಇಲ್ಲಿನ ಸ್ಥಿತಿಗತಿಗಳನ್ನು ತಿಳಿಸಬೇಕು. ಆತನು ನಿನಗೆ ಬಿಸಲೂರು

ರಾಜನ ಪರಿಚಯಮಾಡಿಸಿ ಕೊಡುತ್ತಾನೆ. ನಿನ್ನ ಅದೃಷ್ಟ ಹೇಗಿರುವುದೋ ಯಾರು ಹೇಳಬಲ್ಲರು ?" ಎಂದ ಚಂದ್ರದುರ್ಗಾಧಿಪತಿ. ಇಷ್ಟು ಹೇಳುವಾಗ ಅವನಿಗೆತುಂಬಾ ಆಯಾಸವಾಗಿ ಹೋಗಿತ್ತು.

"ಮತ್ತೆ ಕರುಣಳ ವಿಷಯವೇನು ?" ಎಂದು ಕೇಳಿದ ವಿಜಯ.

"ಆ ವಿಷಯ ನಾನೇನೂ ಹೇಳುವಂತಿಲ್ಲ. ನೀನೇ ಪ್ರಯತ್ನಪಡಬೇಕು ಅಷ್ಟೇ. ನನ್ನ ಕೈಲಾದುದನ್ನು ಇದುವರೆವಿಗೂ ಮಾಡಿದೆ.... ಇನ್ನುಮೇಲೆ ನನ್ನಿಂದ ಏನೂ ಸಾಧ್ಯವಾಗಲಾರದು....ಬದುಕಲಾರೆ..." ನಿರಾಶೆಯಡಗಿತ್ತು ಆ ಮಾತುಗಳಲ್ಲಿ.

"ನೀವೇನೂ ನಿರಾಶೆಪಡಬೇಡಿ. ಶತ್ರುಗಳ ಕಾಟದಿಂದ ಪಾರಾದೆವು. ಹಡಗು ಇನ್ನೇನು ದಡಸೇರುವುದು ; ನಿಮ್ಮ ಗಾಯಗುಣವಾಗುವುದು" ಎಂದು ವಿಜಯ ಧೈರ್ಯಹೇಳಿದ.

"ಯಾವುದು ಹೇಗಾದರೂ ಇನ್ನು ನಾನೇನೂ ಮಾಡುವಂತಿಲ್ಲ. ನನ್ನ ಚಿಂತೆಮಾತ್ರ ದೂರವಾಯಿತು" ಎಂದ ಚಂದ್ರದುರ್ಗಾಧಿಪತಿ. ಅವರು ಸ್ವಲ್ಪ ಹೊತ್ತಿಗೆಲ್ಲಾ ದಡವನ್ನು ತಲುಪಿದರು. ಆಗ ತಾನೇ ಸೂರ್ಯೋದಯವಾಗುತಿತ್ತು.

ವಿಜಯ ಮತ್ತು ಆತನ ಪರಿವಾರ ಹಡಗನ್ನು ರೇವಿನಲ್ಲಿ ಕಟ್ಟಿದರು. ಭಿನ್ನ ಹೃದಯರಾಗಿ ಹಡಗಿನಿಂದ ಇಳಿದರು. ಚಂದ್ರದುರ್ಗಾಧಿಪತಿಯ ಅನುಚರರು ಗಾಯ ಹೊಂದಿದ ತಮ್ಮ ಯಜಮಾನನನ್ನು ಹೊತ್ತುಕೊಂಡು ಅವರ ಶಿಬಿರಕ್ಕೆ ಹೋದರು.

ಆ ರಾತ್ರಿ ಕರುಣಳನ್ನು ಬಿಡಿಸಲು ಮಾಡಿದ ಪ್ರಯತ್ನ ಈ ರೀತಿ ನಿಷ್ಫಲವಾಯಿತು.

ಆದರೆ ವಿಜಯನಿಗೆ ಈ ಪ್ರಯತ್ನದಿಂದ ಚಂದ್ರದುರ್ಗಾಧಿಪತಿಯ ಸ್ನೇಹ ಲಭಿಸಿತು. "ಮತ್ತೊಬ್ಬರ ಸಹಾಯಕ್ಕೆ ಕಾದುನೋಡದೆ ಹೇಗಾದರೂ ಮಾಡಿ ಕರುಣಳನ್ನು ಉಳಿಸಬೇಕು. ನನ್ನ ಶಕ್ತಿಯಮೇಲೆ ಆಧಾರ ಪಡಬೇಕು" ಎಂದು ನಿಶ್ಚಯಿಸಿದ ವಿಜಯ.

[ಇನ್ನೂ ಇದೆ]



# ಹುಲಿ ಮತ್ತು ಚಿರತೆ

**ಹು**ಲಿ ಜಾತಿಯಲ್ಲಿ ಮುಖ್ಯವಾದುವು ಎರಡಿವೆ. ಒಂದನೆಯದು ಪಟ್ಟೆ ಹುಲಿ, ಎರಡನೆಯದು ಚಿರತೆ, ನಮ್ಮ ದೇಶದಲ್ಲೆಲ್ಲಾ ಬಂಗಾಳಾದಲ್ಲಿರುವ ಹುಲಿಗಳೇ ತುಂಬಾ ಭಾರಿಯವೆಂದು ಭಾವಿಸಿರುವೆವು. ಆಕೃತಿ, ಖಂಡಪುಷ್ಟಿ ಬಲವಾಗಿರುವ ಬೃಹ್ಮಾಂಡವಾದ ಹುಲಿಗಳು ಮಂಚೂರಿಯಾ ದೇಶದಲ್ಲಿ ಇವೆ. ಅವು ಹಾಗಿರಲು ಅಲ್ಲಿಯ ಹವಾಗುಣವೇ ಕಾರಣ.

ನಮ್ಮ ದೇಶದ ಭಾರಿ ಹುಲಿ ಎಂದರೆ ಅದು ಹತ್ತು ಅಡಿ ಉದ್ದ, ಐನೂರು ಪೌಂಡು ಭಾರವಿರುತ್ತದೆ. ಪಟ್ಟೆ ಹುಲಿ ಸಿಂಹಕ್ಕಿಂತಲೂ ಹೆಚ್ಚು ಪ್ರಾಣಿಗಳನ್ನು ಕೊಲ್ಲುವುದು. ನಮ್ಮ ದೇಶದ ಹುಲಿ ಪ್ರತಿ ವರ್ಷ ಸರಾಸರಿ 800 ಪ್ರಾಣಿಗಳನ್ನು ಕೊಲ್ಲುವುದೆಂದು ಅಂಕಿಅಂಶಗಳಿದ ತಿಳಿದುಬರುತ್ತದೆ.



ಪಟ್ಟೆಹುಲಿಯಾದ ನಂತರ ಚಿರತೆ. ವರ್ಷಕ್ಕೆ ಸರಾಸರಿ 5000 ಚಿರತೆಗಳನ್ನು ಬೇಟೆಯಾಡಲಾಗುತ್ತಿದೆ ಎಂದು ತಿಳಿದುಬಂದಿದೆ. ಆದರೆ ಚಿರತೆ ಮಾತ್ರ ಸುಮ್ಮನಿರುವುದಿಲ್ಲ. ಅವೂಸಹ ಪ್ರತಿವರ್ಷ ಸರಾಸರಿ 350 ಜನರನ್ನು ಕೊಂದು ಹೊಟ್ಟೆಗೆ ಹಾಕಿಕೊಳ್ಳುತ್ತಿವೆ.

ಹುಲಿ ಮತ್ತು ಸಿಂಹಗಳಿಗಿಂತ ಚಿರತೆಯನ್ನು ಕಂಡು ನಾವು ಹೆದರಬೇಕು. ಏಕೆಂದರೆ ಚಿರತೆ ಮರವೇರಬಲ್ಲದು. ಹುಲಿಗಿಂತ ತುಂಬಾ ಚತುರತೆಯಿಂದ ಪೊದೆಗಳಲ್ಲಿ ನುಗ್ಗಿ ಅವಿತಿಟ್ಟುಕೊಳ್ಳಬಲ್ಲದು. ಹುಲಿಗಿಂತಲೂ ಚಿರತೆ ತುಂಬಾ ಅಪಾಯಕಾರಿ ಎಂದು ಬೇಟೆಗಾರರು ಭಾವಿಸುವರು.

ಹೊಂಚು ಕಾದು ಶತ್ರುವಿನ ಮೇಲೆ ಬೀಳುವುದರಲ್ಲಿ ಹುಲಿಗಿಂತಲೂ ಚಿರತೆ ತುಂಬಾ ಚಾಕಚಕ್ಯತೆ ತೋರುವುದು.

ಈ ಕಾರಣದಿಂದಲೇ ಆಫ್ರಿಕಾ ದೇಶದವರು ಹುಲಿಗೆ ಹೆದರುವುದಿಲ್ಲ. ಚಿರತೆ ಎಂದರೆ ಮಾತ್ರ ಅವರಿಗೆ ತುಂಬಾ ಭಯ. ಆಫ್ರಿಕಾ ದೇಶದ ಹುಲಿಗಳು ತಮ್ಮ ಆಹಾರಕ್ಕೆ ಬಲಿಗೊಳ್ಳುವ ಪ್ರಾಣಿಗಳು ನೋವಿಂದ ಬಾಧೆಪಡದಂತೆ ಕೊಲ್ಲುವುವು. ಅಂದರೆ ಆ ಪ್ರಾಣಿ ಬಾಧೆಪಡಲೂ ಸಹ ಅವಕಾಶವಿಲ್ಲದಂತೆ ತತ್‌ಕ್ಷಣ ಕೊಲ್ಲುವುವು!



# ಮಾಯದ ಮಂಚ

ಪರೋಪಕಾರಿಯಾದ ಧರ್ಮಸಿಂಧು ನೇಪಾಳ ದೇಶದ ರಾಜ. ಆತನು ಮಹಾ ತ್ಯಾಗಿ. ಮಾರುವೇಷದಿಂದ ಎಷ್ಟು ದೂರವಾದರೂ ಪಾದಚಾರಿಯಾಗಿ ಪ್ರಯಾಣ ಮಾಡುವುದು ಧರ್ಮಸಿಂಧುವಿನ ಪದ್ಧತಿ.

ಒಂದುಸಾರಿ ಧರ್ಮಸಿಂಧು ವಾಡಿಕೆಯಂತೆ ಪ್ರಯಾಣ ಹೊರಟು ಕೆಲವು ದಿನಗಳಿಗೆಲ್ಲಾ ಒಂದು ಪರ್ವತ ಪ್ರದೇಶವನ್ನು ಸೇರಿಕೊಂಡ. ಸ್ವಲ್ಪ ದೂರ ಹೋಗಲು ಆತನಿಗೆ ಒಂದು ಭಾರಿ ಹಳ್ಳ ಕಾಣಿಸಿತು. ಅಲ್ಲಿಂದ ಮುಂದಕ್ಕೆ ಹೋಗಲು ಆತನಿಗೆ ದಾರಿಯೇ ಕಾಣಿಸಲಿಲ್ಲ. ಇನ್ನೇನುಮಾಡುವುದು ?

ಧರ್ಮಸಿಂಧು ಅಲ್ಲೇ ನಿಂತು ಆಲೋಚನಾ ಮಗ್ನನಾಗಿರುವಾಗ ಆ ಹಳ್ಳದ ಪಕ್ಕದಿಂದ ಒಬ್ಬವ್ಯಕ್ತಿ ಬಂದ. ಅವನನ್ನುನೋಡಿ ಧರ್ಮ ಸಿಂಧುವಿಗೆ ಬಹಳ ಆಶ್ಚರ್ಯವಾಯಿತು.

ಆತನು ಆಜಾನುಬಾಹು. ಥಳಥಳಿಸುವ ಉಡುಪು ಧರಿಸಿದ್ದಾನೆ. ಕೈಯಲ್ಲಿ ಒಂದು ದೊಣ್ಣೆಯಿದೆ, ತುಂಬಾ ಬಲಶಾಲಿ, ರೂಪವಂತ, ಮಾತುಗಾರ, ದೊಡ್ಡ ಮನುಷ್ಯನ ಠೀವಿಯಿದೆ ಆತನಲ್ಲಿ.

ಆತನು ಧರ್ಮಸಿಂಧುವನ್ನು ಕುರಿತು, "ತಮ್ಮಾ, ತುಂಬಾ ಆಯಾಸಪಟ್ಟಂತೆ ಇದೆ. ಯಾರು ನೀನು? ಎಲ್ಲಿಂದ ಬಂದೆ? ಎಲ್ಲಿಗೆ ಹೋಗಬೇಕು? ಬಾ, ತಮ್ಮ, ನಮ್ಮ ಮನೆಗೆ ಬಾ. ಪಾಪ, ಹೀಗೆ ಹೊತ್ತು ಗೊತ್ತು ಇಲ್ಲದೆ ಅನೇಕರು ಪ್ರಯಾಣ ಮಾಡುತ್ತಿರುತ್ತಾರೆ. ಅಂತಹವರಿಗೆ ರಾತ್ರಿಹೊತ್ತು ಆಸರೆ ಕೊಟ್ಟು ಸಹಾಯ ಮಾಡದಿದ್ದರೆ ಮಾನವಜನ್ಮವೆತ್ತಿ ಪ್ರಯೋಜನವೇನು? ಬಾ, ಬಾ" ಎಂದು ಬಹು ಆದರದಿಂದ ಕರೆದ.

ಧರ್ಮಸಿಂಧು ತನ್ನ ಗಮ್ಯಸ್ಥಾನವನ್ನು ಕುರಿತು ಹೇಳಲು "ಅರೆರೆ, ಹಾದಿತಪ್ಪಿ ಬಲು ದೂರ ಬಂದುಬಿಟ್ಟಿರುವೆ. ಈ ಅವೇಳೆಯಲ್ಲಿ ಬೆಟ್ಟಗಳನ್ನೂ, ಅಡವಿಗಳನ್ನೂ ದಾಟಿಕೊಂಡು ಹೋಗುವುದು ಹುಡುಗಾಟವಲ್ಲ. ನೀನೇನೂ ಭಯಪಡಬೇಡ. ನಮ್ಮ ಮನೆಗೆ ಬಂದುಬಿಡು. ಊಟಮಾಡಿ ಈ ರಾತ್ರಿ ನಮ್ಮ

ಎಸ್. ಗಣೇಶಕಮ್ತಿ, ಮುಕ್ಕ

ಲ್ಲಿಯೇ ಕಳೆದು ಬೆಳಗಾದ ಕೂಡಲೇ ಹೋಗಬಹುದು" ಎಂದ.

ಈ ರೀತಿ ಗಣ್ಯಪುರುಷ ನೊಬ್ಬನು ಕರೆಯಲು ಹೋಗದೇ ಇರುವುದು ಮೂರ್ಖತನವೆಂದು ನೆನೆಸಿ, ಧರ್ಮಸಿಂಧು ಆತನ ಹಿಂದೆ ನಡೆದ.

ಇಬ್ಬರೂ ಮಾತನಾಡುತ್ತಾ ಬೆಟ್ಟದ ಮೇಲೇರಿ ಹೋಗುತ್ತಿರಲು ಕೆಳಗೆ ಹಳ್ಳದಿಂದ ಏನೋ ಶಬ್ದವಾಯಿತು.

ಬಾಗಿ ನೋಡಲು ಒಂದು ವರ್ತಕರ ತಂಡ ಕಾಣಿಸಿತು. ಅವರು ಕತ್ತೆಗಳಮೇಲೆ ಸರಕುಗಳನ್ನು ಹೇರಿಕೊಂಡು ಹೋಗುತ್ತಿದ್ದಾರೆ.

ಅವರನ್ನು ನೋಡಿದಕೂಡಲೇ ಆ ದೊಡ್ಡ ಮನುಷ್ಯ "ಈಗಲೇ ಬಂದುಬಿಡುತ್ತೇನೆ" ಎಂದು ಧರ್ಮ ಸಿಂಧುವಿಗೆ ಹೇಳಿ ಅವರನ್ನು ಸಮೀಪಿಸಿದ. ಧರ್ಮಸಿಂದು ದೂರವೇ ನಿಂತಿದ್ದ.

"ಅಯ್ಯೋ, ಅಣ್ಣಗಳಿರಾ. ಈ ಅಪರಾತ್ರಿಯಲ್ಲಿ ಪ್ರಯಾಣವೆಂತಹದು. ನಮ್ಮ ಮನೆಗೆ ಬನ್ನಿ, ಹಸಿವುತೀರಿಸಿಕೊಂಡು, ರಾತ್ರಿ ವಿಶ್ರಮಿಸಿ, ಬೆಳಗಾದಮೇಲೆ ಹೋಗುವಿರಂತೆ. ಆಹಾ ಇದುವೇ ಸುದಿನ! ಇಷ್ಟೊಂದು ಜನ ಅತಿಥಿಗಳನ್ನು ಸೇರಿಸುವ ಮಹಾಭಾಗ್ಯ ನನಗಿಂದು ಒದಗಿತು" ಎಂದು ಆದರಪೂರ್ವಕವಾಗಿ ಆಹ್ವಾನಿಸಿದ.

ಆ ದೊಡ್ಡ ಮನುಷ್ಯ ವರ್ತಕರೊಂದಿಗೆ ಸಂಭಾಷಿಸುತ್ತಿರುವ ಸಮಯದಲ್ಲಿ, ಧರ್ಮ




ಸಿಂಧುವಿಗೆ ವೃದ್ಧನೊಬ್ಬನು ಕಾಣಿಸಿದ. ಆತ ಸೌದೆಹೊರೆಯನ್ನು ಹೊರಲಾರದೆ ಅವಸ್ಥೆ ಪಡುತ್ತಿದ್ದಾನೆ. ಅವನಿಗೆ ಸಹಾಯ ಮಾಡಲು ಧರ್ಮಸಿಂಧು ಹೋದ.

ಆಗ ಆ ವೃದ್ಧನು "ಅಪ್ಪಾ, ನೀನುಯಾರು? ಇಲ್ಲಿಗೇಕೆ ಬಂದೆ ?" ಎಂದು ಕೇಳಿದ.

ಅದಕ್ಕೆ ಧರ್ಮಸಿಂಧು "ತಾತಾ, ನಾನು ದಾರಿತಪ್ಪಿ ಬಂದುಬಿಟ್ಟೆ. ದಾರಿಯಲ್ಲಿ ಕರುಣಾಳು ಒಬ್ಬಾತನು ಕಾಣಿಸಿ, ತನ್ನ ಮನೆಯಲ್ಲಿ ಇಂದು ಆತಿಥ್ಯಸ್ವೀಕರಿಸಬೇಕೆಂದು ಕೇಳಿಕೊಂಡ. ಈಗಲೇ ಬರುವೆನೆಂದು ಆತನು ಕೆಳಗಿಳಿದು ಹೋದ" ಎಂದನು.

ಈ ಮಾತುಗಳನ್ನು ಕೇಳಿ ಆ ವೃದ್ಧನು ತಲೆತಗ್ಗಿಸಿ ನಿಟ್ಟುಸಿರನ್ನುಬಿಟ್ಟು, ಹೀಗೆಂದ:



"ಅಯ್ಯೋ ನಿನ್ನನ್ನು ಮೋಸಗೊಳಿಸಿದ್ದಾನೆ ಮಗೂ, ನೀನು ಭಾವಿಸಿರುವಂತೆ ಆತನು ದಯಾಶೀಲನಲ್ಲ. ಧೂರ್ತ! ದುರ್ಮಾರ್ಗರಲ್ಲಿ ಅತಿದುರ್ಮಾರ್ಗ" ಎಂದ.

ಆಗ ಧರ್ಮಸಿಂಧು "ನಿಮಗೆ ಹೇಗೆ ಗೊತ್ತು?" ಎಂದು ಕೇಳಿದ. ಅದಕ್ಕೆ ಆ ವೃದ್ಧನು ಈರೀತಿ ಹೇಳಿದ.

"ಅಪ್ಪಾ, ಅವನೊಬ್ಬರಕ್ಕಸ. ಅವನ ಹೆಸರು ಧೂರ್ತಕೇತು. ನಿನ್ನೊಂದಿಗೆ ಹೇಳಿದಂತೆಯೇ ಅನೇಕರಿಗೆ ಹೇಳಿ ತನ್ನ ಮನೆಗೆ ಕರೆದು ಕೊಂಡು ಹೋಗುತ್ತಾನೆ. ಅಲ್ಲಿಗೆ ಹೋದ ವರು ಮತ್ತೆ ಪ್ರಾಣದೊಂದಿಗೆ ಹಿಂದಿರು ಗುವುದೇ ಇಲ್ಲ. ಏಕೆಂದರೆ ಅವನ ಹತ್ತಿರ ಒಂದು ಮಾಯಾಮಂಚವಿದೆ.



ಬಂಗಾರಮಾಡಿಕೊಳ್ಳುವ ವಿಧಾನವನ್ನು ತಿಳಿಯಲು ಅಸುರ ಶಕ್ತಿ ಎಂಬ ಒಂದು ರಾಕ್ಷಿಸಿಯನ್ನು ಕುರಿತು ಪ್ರಾರ್ಥಿಸಿದ. ಅವನ ಭಕ್ತಿಗೆ ಮೆಚ್ಚಿ ಆ ಶಕ್ತಿ ಪ್ರತ್ಯಕ್ಷವಾಗಿ ಆತನಿಗೊಂದು ಮಾಯಾ ಮಂಚವನ್ನು ಕೊಟ್ಟು, ಈ ಮಂಚಕ್ಕೆ ಸರಿಹೋಗುವಂತಹ ನರನನ್ನು ನನಗೆ ಬಲಿಕೊಟ್ಟರೆ ನಿನಗೆಬಂಗಾರಮಾಡುವ ವಿಧಾನವನ್ನು ತಿಳಿಸುವೆನೆಂದು ಹೇಳಿ ಮಾಯವಾದಳು.

ಧೂರ್ತಕೇತು ಸಂತೋಷದಿಂದ ಆ ಮಂಚವನ್ನು ತನ್ನ ಭವನಕ್ಕೆ ತಂದ. ಹಳ್ಳದ ಹತ್ತಿರ ಕಾದಿದ್ದು ಪ್ರಯಾಣಿಕರಿಗೆ ಆತಿಥ್ಯದ ಹೆಸರಿನಲ್ಲಿ ಮನೆಗೆ ಕರೆದುಕೊಂಡು ಹೋಗುವನು. ಅವರಿಗೆ ಈ ಮಂಚದ ವಿಷಯವಾಗಿ ಬಹು ಚಮತ್ಕಾರವಾಗಿ ವರ್ಣಿಸುವನು.

ಅವರು ಮಂಚದಮೇಲೆ ಮಲಗಿದಾಗ ಅವರ ಉದ್ದಹೆಚ್ಚಾಗಿದ್ದರೆ ಅದಕ್ಕೆ ಸರಿಹೋಗುವಂತೆ ಕಾಲುಗಳನ್ನು ಕಟ್ಟಿ ಮುದುರಿಸಲು ಯತ್ನಿಸುವನು. ಉದ್ದ ಕಡಿಮೆಯಾಗಿದ್ದರೆ ನಿರ್ದಾಕ್ಷಿಣ್ಯವಾಗಿ ಕಾಲುಹಿಡಿದೆಳೆಯಲು ಪ್ರಯತ್ನಮಾಡುವನು. ಈ ಯಾತನೆಗಳನ್ನು ಸಹಿಸಲಾರದೆ ಜನ ಸಾಯುತ್ತಿದ್ದಾರೆ. ಆದರೆ ಆ ಮಂಚಕ್ಕೆ ಸರಿ ಹೊಂದುವಾತನು ನಾನೊಬ್ಬನೆ!" ಎಂದ.

"ಹಾಗಾದರೆ ನೀವಿನ್ನೂ ಬದುಕಿರುವಿರಲ್ಲಾ. ನಿಮ್ಮನ್ನು ಶಕ್ತಿಗೆ ಬಲಿಕೊಡಲಿಲ್ಲವೇ?"







"ಬಹಳಕಾಲದ ಹಿಂದೆ ನಿನ್ನಂತೆಯೇ ನಾನೂಸಹ ಈ ದಾರಿಯಲ್ಲಿ ಪ್ರಯಾಣ ಬೆಳೆಸ ಬೇಕಾಯಿತು. ಆಗ ಧೂರ್ತಕೇತು ನನ್ನನ್ನು ಸಂಧಿಸಿ ನನಗೂ ತನ್ನಮನೆಗೆ ಬರಬೇಕೆಂದು ಆಹ್ವಾನನೀಡಿದ.

ನಾನು ಒಪ್ಪಿಕೊಂಡು ಹೋದೆ. ಭಾರಿ ಭೋಜನವೇರ್ಪಾಟುಮಾಡಿದ್ದ. ಊಟ ಮುಗಿದತರುವಾಯ ನಾನು ಕೆಳಗೆ ಮಲಗಲು ಸಿದ್ಧನಾದೆ. ಆಗ ಅವನು ನನ್ನನ್ನು ಈ ಮಂಚ ದಮೇಲೆ ಮಲಗುವಂತೆ ಆದರದಿಂದ ಹೇಳಿ ಹೊರಟುಬಿಟ್ಟ.

ನಾನು ಹಾಸಿಗೆಯಮೇಲೆ ಮಲಗಿದೆ. ನನ್ನ ಉದ್ದ ಆ ತಲ್ಪಕ್ಕಿಂತಲೂ ಒಂದು ಮೊಳ ಹೆಚ್ಚಾಗಿತ್ತು. ಇದೇನೋ ವಿಚಿತ್ರವಾಗಿರು ವಂತೆ ತೋರಿತು. ನಿದ್ರೆಬಾರದು. ಬೇಸರ ದಿಂದ ತಲೆದಿಂಬುತೆಗೆದು ಕಾಲಿನಕಡೆ ತಲೆ ಯಿಟ್ಟುಕೊಂಡು ಮಲಗಿದೆ.

ಆಗ ನನ್ನ ಉದ್ದ ಆ ತಲ್ಪದ ಉದ್ದಕ್ಕೆ ಸರಿಹೋಯಿತು. ಆಗ ನನಗೆ ಈ ತಲ್ಪದ ರಹಸ್ಯ ತಿಳಿಯಿತು. ನಿದ್ದೆ ಬರದಿದ್ದರೂ ಏನು ಜರುಗುವುದೋ ನೋಡ ಬೇಕೆಂದು ಹಾಗೇ ಕಣ್ಣುಮುಚ್ಚಿಕೊಂಡು ಮಲಗಿದೆ.

ಸರಿ ಅರ್ಧರಾತ್ರಿವೇಳೆಗೆ ಧೂರ್ತಕೇತು ಬಂದು ನೋಡಿದ. ನಾನೇ ಆ ತಲ್ಪಕ್ಕೆ ಸರಿ ಯಾಗಿರುವುದನ್ನು ಗಮನಿಸಿದ. ಇಷ್ಟುದಿನಗ ಳಾದಮೇಲೆ ತನ್ನ 'ಶಕ್ತಿ'ಗೆ ಬಲಿಕೊಡಲು ಅರ್ಹನಾದ ಮನುಷ್ಯನು ಸಿಕ್ಕಿದನಲ್ಲಾ ಎಂದು ಸಂತೋಷದಿಂದ ಕುಣಿದಾಡಿದ.



ಬಳಿಕ ನನ್ನನ್ನು ಕುರಿತು ಅಲ್ಲಿಯೇ ಕೆಲ ವುದಿನಗಳಿರಬೇಕೆಂದು ಕೇಳಿಕೊಳ್ಳಲು ನಾನು ಒಪ್ಪಿಕೊಂಡೆ.

ನನ್ನನ್ನು ದೇವಿಗೆ ಬಲಿಕೊಡಲು ನಿರ್ಧ ರಿಸಿದ. ಒಂದು ಸುಮುಹೂರ್ತವಿಡಿಸಿದ. ಈ ವಿಷಯ ನನಗೆ ಸೇವಕರಿಂದ ತಿಳಿಯಿತು.

ಬಲಿಕೊಡಲು ನಿಶ್ಚಯಿಸಿದ ಹಿಂದಿನರಾತ್ರಿ ಮತ್ತೆ ಆತನು ಅರ್ಧರಾತ್ರಿಸಮಯಕ್ಕೆ ನನ್ನ ಬಳಿಗೆ ಬಂದ. ಅಂದು ನಾನು ಬೇಕೆಂತಲೇ ತಲೆಯಕಡೆ ತಲೆ ಯಿಟ್ಟುಕೊಂಡು ಮಲಗಿದ್ದೆ. ನನ್ನ ಉದ್ದ ತಲ್ಪಕ್ಕಿಂತಲೂ ಸುಮಾರು ಒಂದು ಮೊಳ ಹೆಚ್ಚಾಗಿತ್ತು.

ಇದನ್ನು ನೋಡಿ ಧೂರ್ತಕೇತು ತಬ್ಬಿ ಬ್ಬಾದ. ಏನುಮಾಡಲೂ ಅವನಿಗೆ ತೋರ



ಲಿಲ್ಲ. ನನ್ನಲ್ಲಿ ಏನೋ ಮಹತ್ವ ಇರಬೇಕೆಂದೂ, ಇದರ ರಹಸ್ಯವನ್ನು ತಿಳಿಸಬೇಕೆಂದೂ ನನ್ನನ್ನು ಪೀಡಿಸಿದ.

ನಾನೇನೂ ಹೇಳಲಿಲ್ಲ. ನನಗೆ ನಾನಾ ಯಾತನೆಗಳನ್ನು ಕೊಟ್ಟ. ನನ್ನಹಠ ನಾನು ಬಿಡಲಿಲ್ಲ. ಕೊನೆಗೆ ರೋಸಿಹೋಗಿ ನನ್ನನ್ನು ಗುಲಾಮನನ್ನಾಗಿ ಮಾಡಿ ನನಗೆ ಅನೇಕ ಹಿಂಸೆಗಳನ್ನು ಕೊಡುತ್ತಿದ್ದಾನೆ. ಭಾರವಾದ ವಸ್ತುಗಳನ್ನು ನನ್ನಿಂದ ಹೊರಿಸುವನು. ಆದರೊಂದುಮಾತು. ಅವನಿಗೆ ಇದುವರೆವಿಗೂ ಶಕ್ತಿಗೆ ಬಲಿಕೊಡಲು ಅರ್ಹರಾದವರು ಯಾರೂ ಸಿಕ್ಕಲಿಲ್ಲ."

ಅವರು ಈ ರೀತಿ ಮಾತನಾಡುತ್ತಿರುವಾಗ ವರ್ತಕರ ಗುಂಪಿನೊಂದಿಗೆ ಧೂರ್ತಕೇತು ಅಲ್ಲಿಗೆ ಬರುತ್ತಿರುವ ಸದ್ದಾಯಿತು. ಇದನ್ನು ಕಂಡ ಕೂಡಲೇ ಆ ವೃದ್ಧನು ಧರ್ಮಸಿಂಧುವಿಗೆ ರಹಸ್ಯವೊಂದನ್ನು ಕಿವಿಯಲ್ಲಿ ಪಿಸುಗುಟ್ಟಿದ. ಸಂತೋಷ ಸೂಚಿಸಿದ ಧರ್ಮಸಿಂಧು.

ಧೂರ್ತಕೇತು ಅತಿಥಿಗಳಿಗೆಲ್ಲಾ ಅಂದು ಭವ್ಯವಾದ ಭೋಜನವೇರ್ಪಡಿಸಿದ. ಅವರಲ್ಲೆಲ್ಲಾ ಧರ್ಮಸಿಂಧು ತೇಜೋವಂತನಾಗಿ ಕಂಡು ಬಂದ ನಾದುದರಿಂದ ಅವನನ್ನು ಆ ಮಂಚದ ಮೇಲೆ ಮಲಗುವಂತೆ ಹೇಳಿದ.

ಧರ್ಮಸಿಂಧು ಅಂತಹ ತಲ್ಪದ ಮೇಲೆ ಮಲಗುವ ಅಭ್ಯಾಸವಿಲ್ಲದ ಹುಂಬನಂತೆ ನಟಿಸಿದ. ಕಾಲುಗಳಿಡುವ ಕಡೆ ತಲೆಯಿಟ್ಟು ಕೊಂಡು ಮಲಗಿದ.

ಧೂರ್ತಕೇತು ಮಧ್ಯರಾತ್ರಿ ಬಂದು ನೋಡಿದ. ಆತನು ಆ ತಲ್ಪಕ್ಕೆ ಸರಿಹೋಗಿರುವುದನ್ನು ಕಂಡು ಆನಂದ ತುಂದಿಲನಾದ. ಮಾರನೆಯದಿನ ವರ್ತಕರ ಗುಂಪನ್ನೆಲ್ಲಾ ಮರೆತೇಬಿಟ್ಟ. ಧರ್ಮಸಿಂಧುವನ್ನು ಮಾತ್ರ ಇನ್ನೂ ಕೆಲವು ದಿನಗಳಿರುವಂತೆ ಬಲವಂತ ಮಾಡಿದ.

ಧೂರ್ತ ಕೇತುವಿನ ವಿಷಯವನ್ನು ಅರಿತಿದ್ದ ಧರ್ಮಸಿಂಧು ಸಹ ಈ ರಾಕ್ಷಸನನ್ನು ಕೊಂದು ಲೋಕೋಪಕಾರ ಮಾಡಬೇಕೆಂದು ನಿಶ್ಚೈಸಿ, ಅಲ್ಲಿಯೇ ನಿಂತುಬಿಟ್ಟ.

ಆದರೆ ಪ್ರತಿ ದಿನ ಧರ್ಮಸಿಂಧು ಆ ವೃದ್ಧನನ್ನು ರಹಸ್ಯವಾಗಿ ಕಂಡು ಆತನಿಂದ ಸಲಹೆ

ಗಳನ್ನು ಪಡೆಯುತ್ತಿದ್ದನು. ಧೂರ್ತಕೇತುವನ್ನು ಕೊಲ್ಲಲು ಒಂದುದಿನ ಅವರಿಬ್ಬರೂ ನಿರ್ಧರಿಸಿದರು.

ಆ ನಿರ್ಧಾರದ ಪ್ರಕಾರ, ಅಂದು ಧೂರ್ತಕೇತುವನ್ನು ಕಾಲು ಕಡೆ ತಲೆಯಿಟ್ಟು ಆ ಮಾಯಾ ತಲ್ಪದಲ್ಲಿ ಮಲಗುವಂತೆ ಯುಕ್ತಿ ಹೂಡಿದ ಧರ್ಮಸಿಂಧು. ಧೂರ್ತಕೇತು ಆ ತಲ್ಪಕ್ಕೆ ಸರಿಹೊಂದಿದ.

ಅವನು ಗಾಢನಿದ್ರೆಯಲ್ಲಿರುವಾಗ ಧರ್ಮಸಿಂಧು ಮತ್ತು ಆ ವೃದ್ಧನು ಅವನನ್ನು ಮಂಚದೊಂದಿಗೆ ದೇವಿಯ ವಿಗ್ರಹದೆದುರು ತೆಗೆದುಕೊಂಡುಹೋಗಿ ಬಲಿಕೊಡಲು ಸಿದ್ಧರಾದರು.

ಆಗ ಒಂದು ಆಶ್ಚರ್ಯಜರಿಗಿತು : ಫಕ್ಕನೆ ಒಂದು ದಿವ್ಯಪ್ರಕಾಶ ಗೋಚರಿಸಿತು. ಆ ಪ್ರಕಾಶದಲ್ಲಿ ದೇವಿ ಪ್ರತ್ಯಕ್ಷಳಾಗಿ ಹೀಗೆಂದಳು!

"ಎಲೈ, ಧೂರ್ತಕೇತು ನನ್ನ ಭಕ್ತ. ಅವನ ಪ್ರಾಣ ತೆಗೆಯಬೇಡಿ. ಅವನು ಇನ್ನುಮುಂದೆ ಈ ಪ್ರಾಂತ್ಯದಲ್ಲಿರದಂತೆ ಮಾಡುವೆನು. ಅವನಿಗೆ ಹೇಳಿದಪ್ರಕಾರ ನಿಮಗೆ ಬಂಗಾರ ಮಾಡುವ ವಿಧಾನವನ್ನು ತಿಳಿಸುವೆನು".

ದೇವಿಯ ವಾಣಿಯನ್ನು ಕೇಳಿ ಧರ್ಮಸಿಂಧು ಕತ್ತಿಯನ್ನು ಕಳಗಿಳಿಸಿದನು. ದೇವಿ ಧರ್ಮಸಿಂಧು ಮತ್ತು ಆ ವೃದ್ಧನಿಗೆ ಚಿನ್ನವನ್ನುಮಾಡುವ ರಹಸ್ಯವನ್ನು ತಿಳಿಸಿದಳು.

ಇದ್ದಕ್ಕಿದ್ದಂತೆಯೇ ರಾಕ್ಷಸನಾದ ಧೂರ್ತಕೇತು ಎದ್ದುಕುಳಿತ. ಅತ್ತಿತ್ತ ಬೆಪ್ಪುಬೆಪ್ಪಾಗಿ ನೋಡಿದ. ಆತನಿಗೆ ಎಲ್ಲವೂ ಅಯೋಮಯವಾಗಿ ತೋರಿತು. ಏನುತೋಚಿತೋ ಏನೋ ಕೂಡಲೇ ಅಲ್ಲಿಂದ ಪಲಾಯನಸೂತ್ರ ಮಾಡಿದ!

ಧರ್ಮಸಿಂಧು ಬೇಕಾದಷ್ಟು ಬಂಗಾರ ಮಾಡಿದ. ಮತ್ತೇನು? ಸ್ವಲ್ಪಕಾಲದಲ್ಲೇ ಅಪರಿಮಿತ ದ್ರವ್ಯವು ಲಾಭವಾಯಿತು. ಆ ಹಳ್ಳಿಯ ಹತ್ತಿರವಿದ್ದ ಭವನವನ್ನು ತನ್ನವಶಪಡಿಸಿಕೊಂಡ. ಅತ್ತಕಡೆ ಓಡಾಡುವ ಪ್ರಯಾಣಿಕರಿಗೆ ಸಹಾಯವಾಗುವಂತೆ ಅದನ್ನು ಒಂದು ಧರ್ಮಛತ್ರವಾಗಿ ಬದಲಾಯಿಸಿ, ಅನೇಕ ಧರ್ಮಕಾರ್ಯಗಳನ್ನು ಮಾಡುತ್ತಾ ತನ್ನಜೀವನವನ್ನು ಸಾರ್ಥಕಗೊಳಿಸಿಕೊಂಡ.



# ಡೊಂಕು ತಿರುಗಿದರೂ ರೈಲು ಕಂಬಿ ತಪ್ಪುವುದಿಲ್ಲ ಏಕೆ ?

ರೈಲುಗಾಡಿ ನೆಟ್ಟಗೂ ಓಡುವುದು, ಸೊಟ್ಟಸೊಟ್ಟಗೂ ಓಡುವುದು. ಅದೆಷ್ಟು ವೇಗವಾಗಿ ಹೋದರೂ ಡೊಂಕುಗಳನ್ನು ತಿರುಗುವಾಗ ಸಹ ಕಂಬಿತಪ್ಪದಿರುವುದು ತುಂಬಾ ಆಶ್ಚರ್ಯಕರವಾಗಿ ಕಾಣಿಸುವುದಲ್ಲವೆ?

ಇಲ್ಲಿ ಚಲನಸೂತ್ರವನ್ನು ಕುರಿತು ನ್ಯೂಟನ್ ಮಹಾಶಯನು ಹೇಳಿದ ಪ್ರಾಥಮಿಕಸೂತ್ರವನ್ನು ನಾವು ಗಮನಿಸಬೇಕು. ಅದೇನೆಂದರೆ ಕದಲುವ ವಸ್ತುಯಾವುದೇ ಆಗಲೀ ಅಡ್ಡಿ ಆತಂಕವುಂಟಾಗುವವರೆಗೂ ಸರಾಗವಾಗಿ ಸಾಗುವುದು. ಇದು ಅದರಸ್ವಭಾವ.



ಈ ಸೂತ್ರದಪ್ರಕಾರ ನೋಡಿದರೆ ನೆಟ್ಟಗಿರುವ ಮಾರ್ಗದಿಂದ ಡೊಂಕು ತಿರುಗುವಾಗಲೆಲ್ಲಾ ರೈಲುಗಾಡಿ ಕಂಬಿ ತಪ್ಪುತ್ತಿರಲೇಬೇಕಷ್ಟೆ. ಆದರೆ ಹಾಗೆ ನಡೆಯುತ್ತಿಲ್ಲ. ಇದಕ್ಕೆ ಕಾರಣಗಳೆರಡು: ಮೊದಲನೇಯದು ರೈಲುಗಾಡಿಯ ಚಕ್ರಗಳಿಗೆ ಒಂದುಕಡೆ ಅಂಚಿಗಿರುವ ಏರ್ಪಾಟು. ಆದರೆ ರೈಲುಗಾಡಿ ಕಂಬಿತಪ್ಪಿ ಬೀಳದಿರಲು ಇದೊಂದೇ ಕಾರಣವಲ್ಲ.

ಈ ಚಿತ್ರದ ಕೆಳಭಾಗದಲ್ಲಿ ಬೇರೆಬೇರೆಯಾಗಿ ತೋರಿಸುವ ಚಿತ್ರಗಳನ್ನು ನೋಡಿ. ರೈಲುಗಾಡಿಯ ಚಕ್ರ ಎಡಗಡೆ ಚಿತ್ರದಲ್ಲಿ ತೋರಿಸಿರುವಂತೆ ಚಪ್ಪಟೆಯಾಗಲ್ಲದೆ, ಬಲಗಡೆ ತೋರಿಸಿರುವಂತೆ ಒಂದುರೀತಿ ಬಾಗಿಕೊಂಡಿರುತ್ತದೆ. ಈ ರೀತಿ ಬಾಗಿಕೊಂಡಿರುವುದರಿಂದ ರೈಲು ಕದಲುವಾಗ ಚಕ್ರಗಳು ಹೊರಕ್ಕೆ ತಳ್ಳಲ್ಪಡುತ್ತಿದ್ದರೂ ಸಹ ಅವು ಕಂಬಿತಪ್ಪದಂತೆ ಚಕ್ರಗಳಿಗಿರುವ ಅಂಚುಗಳು ಅವುಗಳನ್ನು ತಡೆದು ಸರಿಯಾದ ಸ್ಥಳದಲ್ಲಿ ಕೂರಿಸುವುದು.

ಎರಡನೇಯ ದೇನೆಂದರೆ ಡೊಂಕುತಿರುಗುವಲ್ಲಿ ರೈಲು ಕಂಬಿಯನ್ನು ರೈಲುಗಾಡಿಗೆ ನಿರ್ಣಯಿಸಿದ ವೇಗಕ್ಕೆ ತಕ್ಕಂತೆ ಜೋಡಿಸಿರುತ್ತಾರೆ. ಇದರಿಂದ ಡೊಂಕು ತಿರುಗಿದರೂ ಗಾಡಿ ಕಂಬಿತಪ್ಪದೆ ಸರಾಗವಾಗಿ ಓಡಲು ಅವಕಾಶವಿದೆ.




ಪಾಂಡ್ಯರಾಜರು ಮಧುರೆಯನ್ನು ಆಳುತ್ತಿದ್ದ ಕಾಲದಲ್ಲಿ ಒಬ್ಬಾನೊಬ್ಬ ರಾಜನ ಹತ್ತಿರ ವಾದವೂರಾರ್ ಎಂಬ ಮಂತ್ರಿಯಿದ್ದ. ವಾದವೂರಾರ್ ಶಿವಭಕ್ತ.

ಒಂದು ದಿನ ರಾಜನು ವಾದವೂರಾರನ್ನು ಕುರಿತು "ಎಲೈ, ಮಂತ್ರಿ, ನೀನು ಚೋಳ ರಾಜ್ಯಕ್ಕೆ ಹೋಗಿ ನಮ್ಮ ಆಸ್ಥಾನಕ್ಕೆ ಕೀರ್ತಿ ತರುವಂತಹ ಉತ್ತಮ ಜಾತಿಯ ಅಶ್ವಗಳನ್ನು ಕೊಂಡುಕೊಂಡು ಬಾ. ಎಷ್ಟು ಹಣ ಖರ್ಚಾದರೂ ಚಿಂತೆಯಿಲ್ಲ" ಎಂದು ಹೇಳಿದನು.

ರಾಜಾಜ್ಞೆಯನ್ನು ಕಾರ್ಯಗತ ಮಾಡಲು ವಾದವೂರಾರ್ ಚೋಳದೇಶಕ್ಕೆ ಹೊರಟನು. ದಾರಿಯಲ್ಲಿ ಒಂದು ಮರದ ಹತ್ತಿರ ವೃದ್ಧ ಬ್ರಾಹ್ಮಣನೊಬ್ಬನು ಎದುರುಸಿಕ್ಕಿದನು.

ತೇಜೋವಂತನಾದ ಆ ವಿಪ್ರನನ್ನು ಕಂಡ ಕೂಡಲೇ ವಾದವೂರಾರ್ ಮನಸ್ಸಿನಲ್ಲಿ ಒಂದು ರೀತಿ ಸಂಚಲನೆಯುಂಟಾಯಿತು. ಆ ಮುದುಕ ಒಬ್ಬ ಮಹಾತ್ಮನಾಗಿರಬಹುದೆಂದು ಭಾವಿಸಿ, ಆತನಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ.

"ಮಹಾತ್ಮರೇ, ಚಿಕ್ಕಂದಿನಿಂದಲೂ ತಿಳಿದುಕೊಳ್ಳಬೇಕೆಂದಿರುವ ಮುಕ್ತಿ ಮಾರ್ಗವನ್ನು ತಾವು ತೋರಿಸಿಕೊಡಬಲ್ಲಿರೆಂದು ನನ್ನಲ್ಲಿ ಭಾವನೆಯುಂಟಾಗಿದೆ. ಆದುದರಿಂದ ದಯವಿಟ್ಟು ನನಗೆ ತರುಣೋಪಾಯವನ್ನು ಸೂಚಿಸಿ ಪುಣ್ಯಕಟ್ಟಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇನೆ" ಎಂದ ವಾದವೂರಾರ್.

ಆಗ ವೃದ್ಧಬ್ರಾಹ್ಮಣನ ರೂಪದಲ್ಲಿದ್ದ ಪರಮೇಶ್ವರನು ತನ್ನ ನಿಜರೂಪವನ್ನು ತೋರಿ ವಾದವೂರಾರಿಗೆ ಮೋಕ್ಷಸಾಧನೋಪಾಯವನ್ನು ತಿಳಿಸಿ ಅದೃಶ್ಯನಾದ.

ಆ ಕ್ಷಣದಿಂದ ವಾದವೂರಾರಿಗೆ ಕವಿತಾಶಕ್ತಿ ಬಂತು. ತನ್ನ ಇಷ್ಟದೈವನಾದ ಪರಮೇಶ್ವರನಮೇಲೆ ಅನೇಕ ಅಮೋಘವಾದ ಗೀತೆಗಳನ್ನು ರಚಿಸಿ ಹಾಡಲಾರಂಭಿಸಿದನು.

ವಾದವೂರಾರ್ ಹಾಡುತ್ತಿದ್ದ ಮಧುರ ಗೀತಗಳಿಗೆ ಪರಮಶಿವನೇ ತನ್ಮಯನಾದನು. ಒಂದು ದಿನ ಆತನಿಗೆ ಪ್ರತ್ಯಕ್ಷನಾಗಿ ಹೀಗೆಂದ:

ಡಿ. ಸುಬ್ರಹ್ಮಣ್ಯ, ಮದ್ರಾಸು




"ಭಕ್ತಾಗ್ರೇಸರನೇ, ನಿನ್ನ ಬಾಯಿಂದ ಹೊರಬರುವ ಮಾತುಗಳು ಒಂದೊಂದೂ ಒಂದೊಂದು ಮಾಣಿಕ್ಯದಷ್ಟು ಬೆಲೆ ಬಾಳುವುದು. ಇಂದಿನಿಂದ ನಿನ್ನನ್ನು ಜನ ಮಾಣಿಕ್ಯ ವಾಚಕರ್ ಎಂದು ಕರೆಯುವರು"

ಶಿವಭಕ್ತನಾದ ವಾದವೂರಾರ್ ತನ್ನ ಹತ್ತಿರವಿದ್ದ ರಾಜದ್ರವ್ಯವನ್ನೆಲ್ಲಾ ವಿನಿಯೋಗಿಸಿ ಒಂದು ಕಡೆ ಸುಂದರವಾದ ಶಿವಾಲಯವನ್ನು ನಿರ್ಮಿಸಿ, ತನ್ನ ಇಷ್ಟದೇವರಿಗೆ ಸೇವೆ ಮಾಡುತ್ತಾ ಅಲ್ಲೇ ಉಳಿದುಬಿಟ್ಟ.

ಇಷ್ಟರಲ್ಲಿ ರಾಜಭಟರು ಆತನಿಗಾಗಿ ಹುಡುಕುತ್ತಾ ಅಲ್ಲಿಗೆ ಬಂದರು. ಕೂಡಲೇ ಆಸ್ಥಾನಕ್ಕೆ ಬರಬೇಕೆಂದು ರಾಜಾಜ್ಞೆಯಾಗಿದೆ ಎಂದು ವಾಚಕರ್‌ಗೆ ಹೇಳಿದರು.

ವಾಚಕರ್ ಅವರೊಂದಿಗೆ ಮಧುರೆಗೆ ಹೋದ. ರಾಜನು ತನಗೆ ಹಿಂಸೆ ಕೊಡುವನೆಂದು ವಾಚಕರ್‌ಗೆ ತಿಳಿದಿತ್ತು. ಆತನ ಊಹೆ ನಿಜವಾಯಿತು. ಅಶ್ವಗಳನ್ನು ಕೊಂಡು ತರದೆ ಹೋದ ಕಾರಣ ರಾಜನು ವಾಚಕರ್‌ಗೆ ನಾನಾರೀತಿ ಹಿಂಸೆಮಾಡತೊಡಗಿದ.

ಇದನ್ನು ಕಂಡು ಪರಮೇಶ್ವರನು ವ್ಯಾಕುಲ ಹೊಂದಿ, ತನ್ನ ಭಕ್ತನನ್ನು ರಕ್ಷಿಸಲು ಒಂದು ಉಪಾಯ ಹೂಡಿದ. ಅಡವಿಯಲ್ಲಿದ್ದ ನರಿಗಳ ಗುಂಪನ್ನು ಉತ್ತಮಜಾತಿಯ ಕುದುರೆಗಳನ್ನಾಗಿ ರೂಪಾಂತರಮಾಡಿ, ತಾನು ಅಶ್ವಪಾಲಕನ ವೇಷ ತಾಳಿ, ಆ ಮಾಯಾ ಕುದುರೆಗಳನ್ನು ರಾಜನಲ್ಲಿಗೆ ಸಾಗಿಸಿಕೊಂಡು ಹೋದ.

ಕುದುರೆಗಳನ್ನು ಕಂಡ ಕೂಡಲೇ ರಾಜನು ಆಶ್ಚರ್ಯಭರಿತನಾದ.

ಆಗ ಕುದುರೆಯವನು ರಾಜನೊಂದಿಗೆ "ಮಹಾಸ್ವಾಮಿ, ನಾನು ಮಾಣಿಕ್ಯವಾಚಕರನ ಗೆಳೆಯ. ಚೋಳರಾಜ್ಯದಲೆಲ್ಲಾ ಸುತ್ತಾಡಿ ಎಷ್ಟು ಹಣವಾದರೂ ಹಿಂದೇಟುಹಾಕದೆ ಉತ್ತಮ ಜಾತಿಯ ಕುದುರೆಗಳನ್ನು ಕೊಂಡು ತರುವಂತೆ ಆತನು ನನಗೆ ಹೇಳಿದ. ಇವೇ ಆ ಕುದುರೆಗಳು" ಎಂದು ಹೇಳಿದ. ಈ ಮಾತುಗಳನ್ನು ಕೇಳಿ ರಾಜನು ತಾನು ದುಡುಕಿ ಮಂತ್ರಿಗೆ ಹಿಂಸೆ ಕೊಟ್ಟದ್ದಕ್ಕೆ ತುಂಬಾ ಪಶ್ಚಾತ್ತಾಪಗೊಂಡು, ಕೂಡಲೇ ಆತನನ್ನು ಬಂಧವಿಮುಕ್ತನನ್ನಾಗಿ ಮಾಡಿದ. ಮತ್ತು ಹೊಸ ಅಶ್ವಗಳನ್ನು ಅಶ್ವಶಾಲೆಯಲ್ಲಿ ಕಟ್ಟಿಹಾಕಿಸಿದ.

ಆದರೆ ಆ ರಾತ್ರಿ ಒಂದು ವಿಚಿತ್ರವು ಜರುಗಿತು. ಕುದುರೆಯ ರೂಪದಲ್ಲಿದ್ದ ಆ ನರಿಗಳೆಲ್ಲಾ ತಮ್ಮ ನಿಜರೂಪವನ್ನು ಹೊಂದಿ ಲಾಯಗಳಲ್ಲಿದ್ದ ರಾಜನ ಅಶ್ವಗಳನ್ನೆಲ್ಲಾ ಕಚ್ಚಿ ಗಾಯಮಾಡಿ ಅಡವಿಗೆ ಓಡಿಹೋದವು.

ಇದರಿಂದಾಗಿ ರಾಜನ ಅಶ್ವಶಾಲೆಯಲ್ಲಿದ್ದ ಮೇಲು ಜಾತಿಯ ಕುದುರೆಗಳಲ್ಲಿ ಅನೇಕವು ಸತ್ತುಹೋದವು. ಉಳಿದಿದ್ದ ಕೆಲವು ಅಪ್ರಯೋಜಕವಾದವು.

ಈ ವಿಷಯ ತಿಳಿದ ಕೂಡಲೇ ರಾಜ ಸಿಡಿಮಿಡಿಗೊಂಡ. ಮಾಣಿಕ್ಯ ವಾಚಕರ್ ಏನೋ ಮಾಯಮಂತ್ರಗಳನ್ನು ಮಾಡಿ ತನಗೆ ಮೋಸ ಮಾಡುತ್ತಿರುವನೆಂದು ಭಾವಿಸಿ, ಆತನಿಗೆ ಮೊದಲಿಗಿಂತಲೂ ಹೆಚ್ಚು ಉಪದ್ರವ ಕೊಡಲು ಪ್ರಾರಂಭಿಸಿದ.

ತನ್ನ ಭಕ್ತನಿಗೆ ರಾಜನು ಕೊಡುತ್ತಿದ್ದ ಕಿರುಕುಳ ನೋಡಿ ಶಿವನು ರುದ್ರಾವತಾರ ತಾಳಿ, ತಲೆಯ ಮೇಲಿದ್ದ ಗಂಗೆಯನ್ನು ಭೂಲೋಕಕ್ಕೆ ಕಳುಹಿಸಿದ. ವೈಗಾ ನದಿ ಅಕಸ್ಮಾತ್ತಾಗಿ ಉಕ್ಕಿತು. ಮಧುರಾ ಪಟ್ಟಣ ಕೊಚ್ಚಿಕೊಂಡು ಹೋಗುವುದೇನೋ ಎಂದು ಭಯವಾಯಿತು ರಾಜನಿಗೆ!

ಈ ಆಪತ್ತಿನ ಸಮಯದಲ್ಲಿ ಮಾಡುವುದಾದರೂ ಏನಿದೆ? ಜನರೆಲ್ಲಾ ಮಣ್ಣು ಅಗೆದು ನಗರದ ಪಕ್ಕದಲ್ಲಿ ಪ್ರವಹಿಸುವ ವೈಗಾ ನದಿ ಅಡ್ಡಗಟ್ಟೆಯನ್ನು ಭದ್ರಪಡಿಸುವಂತೆ ಆಜ್ಞೆ ಮಾಡಿದ.




ಆ ಪಟ್ಟಣದ ಹಿರಿಕಿರಿಯರೆಲ್ಲರೂ ಶ್ರಮವಹಿಸಿ ಮಣ್ಣು ಅಗೆಯುತ್ತಿರುವರು. ಆದರೆ ಮುದುಕಿಯೊಬ್ಬಳು ಮಾತ್ರ ವೃದ್ಧಾಪ್ಯದಿಂದ ರಾಜಾಜ್ಞೆಯನ್ನು ಪಾಲಿಸಲಾಗದೆ ಚಿಂತಿಸುತ್ತಿರುವಳು.

ಆಗ ಕೂಲಿಮಾಡುತ್ತಿದ್ದ ಸಣ್ಣ ಬಾಲಕನೊಬ್ಬನು ಅಲ್ಲಿಗೆ ಬಂದು ಆ ಮುದುಕಿಗೆ ಹೀಗೆ ಹೇಳಿದ: "ಅಜ್ಜೀ, ಅಜ್ಜೀ, ರಾಜನೇನು ಶಿಕ್ಷೆ ವಿಧಿಸುವನೋ ಎಂದು ನೀನು ಭಯಪಡಬೇಡ. ನಿನ್ನ ಪಾಲಿನ ಕೆಲಸವನ್ನು ನಾನು ಮಾಡುತ್ತೇನೆ" ಎಂದು ಭರವಸೆ ಕೊಟ್ಟ.

ಬಾಲಕನ ಮಾತು ಕೇಳಿ ಆ ಮುದುಕಿಗೆ ಹೋದ ಪ್ರಾಣ ಮತ್ತೆ ಬಂದಂತಾಯಿತು.



ಆ ಮುದುಕಿಯೊಂದಿಗೆ ಆ ಬಾಲಕನು ನದಿಯ ದಡದ ಹತ್ತಿರ ಬಂದ. ಆದರೆ ಕೆಲಸ ಮಾಡುವುದನ್ನು ಬಿಟ್ಟು, ಮುದುಕಿ ತಂದಿದ್ದ ತಿಂಡಿ ತಿನ್ನುತ್ತಾ ಇತರ ಹುಡುಗರೊಂದಿಗೆ ಆಟವಾಡಲು ಪ್ರಾರಂಭಿಸಿದ.

ಪ್ರತಿಪ್ರಜೆಯೂ ಕಷ್ಟಪಟ್ಟು ನಗರರಕ್ಷಣೆ ಮಾಡುವಕಾರ್ಯದಲ್ಲಿ ನಿರತರಾಗಿಲು, ಈ ತುಂಟ ನಿಶ್ಚಿಂತೆಯಾಗಿ ಆಟವಾಡುತ್ತಿರುವುದನ್ನು ಕಂಡು ರಾಜನಿಗೆ ತುಂಬಾ ಕೋಪ ಬಂತು. ತತ್‌ಕ್ಷಣ ತನ್ನ ಕೈಯಲ್ಲಿದ್ದ ಬೆತ್ತದಿಂದ ಆ ಹುಡುಗನ ಬೆನ್ನಿನಮೇಲೆ ಒಂದು ಏಟು ಕೊಟ್ಟ.

ಅದೇನು ವಿಚಿತ್ರವೋ ರಾಜನು ಕೊಟ್ಟ ಆ ಏಟಿಗೆ ಅಲ್ಲಿದ್ದವರೆಲ್ಲರ ಬೆನ್ನೂ ಚುರ್ರೆಂದಿತು. ಎಲ್ಲರ ಬೆನ್ನಿನಮೇಲೆ ಬಾಸುಂಡೆ! ಎಲ್ಲರೂ ತಮ್ಮ ತಮ್ಮ ಬೆನ್ನನ್ನು ತಡವಿಕೊಂಡರು. ಎಲ್ಲರೊಂದಿಗೆ ರಾಜನ ಬೆನ್ನಿನ ಮೇಲೂ ಬಾಸುಂಡೆ! ತನ್ನ ಬೆನ್ನು ಚುರ್ರೆಂದ ಕೂಡಲೇ ರಾಜನಿಗೆ ಜ್ಞಾನೋದಯವಾಯಿತು. ಆ ಬಾಲಕ ಪರಮೇಶ್ವರನ ಅವತಾರವೇ ಎಂದು ಅರಿತುಕೊಂಡು ತನ್ನ ಅಪರಾಧವನ್ನು ಕ್ಷಮಿಸಿ ಅನುಗ್ರಹಿಸುವಂತೆ ಬಾಲಕನನ್ನು ಪ್ರಾರ್ಥಿಸಿದ.

ಆದರೆ, ಆ ವೇಳೆಗಾಗಲೆ ಆ ಬಾಲಕ ಅದೃಶ್ಯನಾಗಿದ್ದ. ಅಷ್ಟೇ ಅಲ್ಲ. ಆ ಬಾಲಕನನ್ನು ಕುರಿತು ಪ್ರಜೆಗಳು ವಿಸ್ಮಯಕರವಾದ ವಿಷಯವನ್ನು ಮಾತನಾಡಿಕೊಳ್ಳುತ್ತಿದ್ದರು. ಎಷ್ಟು ಜನ ಪ್ರಯತ್ನಮಾಡಿದರೂ ವೈಗಾ ನದಿ ಅಡ್ಡಗಟ್ಟೆ ನಿಲ್ಲಲಿಲ್ಲವೆಂತಲೂ, ಆಟವಾಡುತ್ತಾ, ಹಾಡುತ್ತಾ ಇದ್ದ ಆ ತುಂಟ ಬಾಲಕನು ಒಂದು ಹಿಡಿ ಮಣ್ಣನ್ನು ಎರಚಲು ನದಿಯ ಪ್ರವಾಹ ನಿಂತುಹೋಯಿತೆಂತಲೂ, ಆ ಬಾಲಕನ ಮಹಿಮೆಯಿಂದಲೇ ನೀರು ಅಡ್ಡಗಟ್ಟೆ ದಾಟಲಿಲ್ಲವೆಂತಲೂ, ಅದರಿಂದಲೇ ನಗರವು ರಕ್ಷಿಸಲ್ಪಟ್ಟಿತೆಂದೂ ಹೇಳಿಕೊಳ್ಳುತಿದ್ದರು.

ಈ ಮಾತುಗಳು ಕಿವಿಗೆ ಬೀಳಲು ರಾಜ ಚಕಿತನಾದ. "ಏನಾದರಾಗಲೀ, ಆ ಬಾಲಕ ಮತ್ತೆ ನನ್ನ ಕಣ್ಣಿಗೆ ಕಾಣಿಸಿದಹೊರತು ನಾನು ಇಲ್ಲಿಂದ ಕದಲಲಾರೆ" ಎಂದು ಹಠತೊಟ್ಟು ಅಲ್ಲೇ ಕುಳಿತುಬಿಟ್ಟ.

ಹೀಗೆ ಹಠತೊಟ್ಟು ಕುಳಿತ ರಾಜನಿಗೆ ಅಶರೀರವಾಣಿಯೊಂದು ಕೇಳಿಸಿತು.

"ರಾಜನೇ, ನಿನ್ನ ಆಸ್ಥಾನದಲ್ಲಿರುವ ಮಂತ್ರಿ ಮಾಣಿಕ್ಯವಾಚಕರ್ ಸಾಮಾನ್ಯನೆಂದು ನೀನು ಎಣಿಸಿರಬಹುದು. ಆದರೆ ಆತನು ನನ್ನ ಶಿಷ್ಯ, ಮಹಾಭಕ್ತ. ಮಹಿಮಾನ್ವಿತನು. ಈಗಲಾದರೂ ತಿಳಿದುಕೋ"

ಆ ಕ್ಷಣವೇ ರಾಜನು ಮಾಣಿಕ್ಯವಾಚಕರ್ ಹತ್ತಿರಕ್ಕೆ ಹೋಗಿ ಕ್ಷಮಾಪಣೆ ಕೇಳಿಕೊಂಡು, ಆತನನ್ನು ಸೆರೆಮನೆಯಿಂದ ಬಿಡುಗಡೆ ಮಾಡಿಸಿದ.

ವಾಚಕರ್ ತಿರುಪ್ಪೆಂದುರೈ ಎಂಬ ಊರಿಗೆ ಹೋಗಿ ಅಲ್ಲಿ ನಿಶ್ಚಿಂತೆಯಾಗಿ ಶಿವಾರಾಧನೆ ಮಾಡಿಕೊಳ್ಳುತ್ತಿದ್ದ. ಹೀಗೇ ಇರಲು ಒಂದು ಸಾರಿ ಚಿದಂಬರಕ್ಕೆ ಹೋಗುವಂತೆ ಪರಶಿವನ ಆಜ್ಞೆ ಆಯಿತು. ಆ ಪ್ರಕಾರವೇ ವಾಚಕರ್ ಚಿದಂಬರಕ್ಕೆ ಹೋದ. ಅಲ್ಲಿಗೆ ಒಬ್ಬ ಜೈನ ಸನ್ಯಾಸಿ ಮತ ಪ್ರಚಾರ ಮಾಡಲು ಬಂದ. ವಾಚಕರ್ ಮತ್ತು ಆ ಸನ್ಯಾಸಿ ನಡುವೆ ತೀವ್ರವಾದ ವಾಗ್ವಾದ ನಡೆಯಿತು. ಆ ಸನ್ಯಾಸಿ ಮಾಣಿಕ್ಯವಾಚಕರ್ ಪ್ರಶ್ನೆಗಳಿಗೆ ಉಚಿತ ಉತ್ತರಗಳನ್ನು ಕೊಡಲಾರದೆ ಹೋದುದು ಮಾತ್ರವೇ ಅಲ್ಲದೆ "ಮೂಕಳಾದ ಚೋಳರಾಜನ ಮಗಳನ್ನು ಮಾತಾಡುವಂತೆ ಮಾಡಿದರೆ ಮತ್ತೆ ನಾನು ಸೋಲನ್ನು ಒಪ್ಪಿಕೊಳ್ಳುವೆನು" ಎಂದು ಸವಾಲು ಬೇರೆ ಹಾಕಿದ.

ಆಗ ಮಾಣಿಕ್ಯವಾಚಕರ್ ಪರಮೇಶ್ವರನ ಕೃಪೆಯಿಂದ ಆ ಜೈನಸನ್ಯಾಸಿ ತನಗೆ ಹಾಕಿದ ಪ್ರಶ್ನೆಗಳಿಗೆಲ್ಲಾ ಆ ಮೂಕ ಹುಡುಗಿಯಿಂದಲೇ ಜವಾಬು ಕೊಡಿಸಿದ. ಆ ಹುಡುಗಿಯ ಬಾಯಿಂದ ಹೊರಬೀಳುತ್ತಿದ್ದ ಯುಕ್ತವಾದ ಉತ್ತರಗಳನ್ನು ಕೇಳಿ ಆ ಜೈನ ಪ್ರಚಾರಕನೂ ಅಲ್ಲಿ, ನೆರೆದಿದ್ದ ಜನರೂ ಬೆರಗಾದರು. ಆಗ ಆ ಸನ್ಯಾಸಿ ವಾಚಕರ್‌ಗೆ ಸಾಷ್ಟಾಂಗ ನಮಸ್ಕಾರಮಾಡಿ, ಕೂಡಲೇ ಶೈವಮತವನ್ನು ಅವಲಂಬಿಸಿ, ಆತನ ಪ್ರಿಯಶಿಷ್ಯನಾದ.

ತರುವಾಯ ಮಾಣಿಕ್ಯವಾಚಕರ್ ಅನೇಕ ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ, ಕಡೆಗೆ ಪರಮೇಶ್ವರಲ್ಲಿ ಐಕ್ಯವಾದರು.






ಒಂದಾವರ್ತಿ ಗುರುಗೋವಿಂದರು ತುಂಬಿದ ಸಭೆಯಲ್ಲಿರುವಾಗ, ಸೇವಕರು ಒಬ್ಬನನ್ನು ಆತನ ಮುಂದೆ ತಂದು ನಿಲ್ಲಿಸಿದರು. "ಪ್ರಭೂ ಈತನ ಹೆಸರು ಕನ್ನಯ್ಯ. ಈತನು ಒಬ್ಬ ದ್ರೋಹಿ ಎಂದು ನಮಗೆ ತಿಳಿಯಿತು. ಆದುದರಿಂದ ನಿಮ್ಮ ಮುಂದೆ ಹಾಜರುಪಡಿಸಿದ್ದೇವೆ" ಎಂದು ಹೇಳಿದರು ಆ ಸೇವಕರು.

ಕನ್ನಯ್ಯ ಮರ್ಯಾದಸ್ಥ, ಉದಾರ ಹೃದಯನು. ಈ ವಿಷಯ ಗುರುಗೋವಿಂದರಿಗೆ ತಿಳಿದಿದೆ. "ಸರಿ. ಈತ ಮಾಡಿದ ಅಪರಾಧವೇನು?" ಎಂದು ಆ ಸೇವಕರನ್ನು ಕೇಳಿದರು ಗುರುಗೋವಿಂದರು.

"ಮಹಾಪ್ರಭೂ, ನಮ್ಮ ವೀರರು ಒಂದು ಕಡೆ ಶತ್ರು ಸೈನ್ಯವನ್ನು ಸಂಹರಿಸುತ್ತಿದ್ದಾರೆ. ಈತನು ತುಸ ಪ್ರಾಣದಿಂದ ಉಳಿದಿರುವ ಮುಸ್ಲಿಂ ಸೈನಿಕರ ಬಾಯಲ್ಲಿ ನೀರು ಸುರಿಯುತ್ತಿದ್ದಾನೆ! ನೋಡಿದಿರಾ ಎಂತಹ ಸ್ವಾಮಿದ್ರೋಹಕ್ಕೆ ಕೈಹಾಕಿದ್ದಾನೆ"

ಈ ಮಾತು ಕೇಳಿ ಗುರುಗೋವಿಂದರು ಕನ್ನಯ್ಯನನ್ನು ಕುರಿತು "ನೀನು ಏನು ಹೇಳುವಿಯಪ್ಪಾ?" ಎಂದರು.

ಅದಕ್ಕೆ ಕನ್ನಯ್ಯ ಹೀಗೆಂದು ಉತ್ತರವಿತ್ತ: "ಮಹಾರಾಜ್, ಯುದ್ಧರಂಗದಲ್ಲಿ ನನ್ನ ದೃಷ್ಟಿಗೆ ಹಿಂದೂ ಸೈನಿಕರು ಯಾರು ಮುಸ್ಲಿಂ ಸೈನಿಕರು ಯಾರು ಎಂಬ ಭೇದ ತಿಳಿಯದಾಗಿದೆ. ಗಾಯಗೊಂಡು ಬಿದ್ದಿರುವ ಪ್ರತಿ ವೀರನೂ ನನ್ನ ಕಣ್ಣಿಗೆ ದೈವಸ್ವರೂಪನಾಗಿ ಕಾಣಿಸುತ್ತಾನೆ. ಆದುದರಿಂದ ಭೇದವನ್ನು

ಟಿ. ಕೆ. ಸುಂದರ, ಕೃಷ್ಣಗಿರಿ

ಎಣಿಸದೆ ಯುದ್ಧ ಭೂಮಿಯಲ್ಲಿ ಬಿದ್ದಿರುವ ವೀರರಿಗೆಲ್ಲಾ ನನ್ನ ಕೈಲಾದ ಸೇವೆ ಮಾಡುತ್ತಿರುವೆನು.

ಗುರುಗೋವಿಂದರಿಗೆ ಈ ಅಮೃತತುಲ್ಯವಾದ ಮಾತುಗಳನ್ನು ಕೇಳಿ ತುಂಬಾ ಸಂತೋಷವಾಯಿತು. ಕೂಡಲೇ ಆಸನದಿಂದೆದ್ದುಬಂದು ಕನ್ಹಯ್ಯನನ್ನು ಅಪ್ಪಿ, ಹರಸಿದರು.

ಅಷ್ಟೇ ಅಲ್ಲ, ತಮ್ಮ ಪೆಟ್ಟಿಗೆಯಿಂದ ಒಂದು ಡಬ್ಬಿಯನ್ನು ತೆಗೆದು ಕನ್ಹಯ್ಯನಿಗೆ ಕೊಟ್ಟು "ಅಣ್ಣಾ, ಕೆಳಗೆಬಿದ್ದ ವೀರರಿಗೆ—ಆ ವೀರರು ಯಾವ ಮತದವರೇ ಆಗಿರಲಿ—ನೀರುಮಾತ್ರ ಕೊಡುವುದಲ್ಲ, ಈ ತೈಲವನ್ನೂ ಅವರ ಗಾಯಗಳಿಗೆ ಲೇಪಿಸಿ, ಕಟ್ಟುಕಟ್ಟಿ ಗುಣಪಡಿಸು. ಜ್ಞಾನಿಯಾದ ನೀನು ಒಂದು ವಿಷಯ ಜ್ಞಾಪಕದಲ್ಲಿಟ್ಟುಕೋ. ಈಗ ಯುದ್ಧದಲ್ಲಿ ಹೋರಾಡುತ್ತಿರುವುದು ಹಿಂದೂ-ಮುಸ್ಲಿಮರಲ್ಲ. ಅಲ್ಲ, ಎಷ್ಟುಮಾತ್ರವೂ ಅಲ್ಲ. ಧರ್ಮದೇವತೆ ಬಂದು ಅಧರ್ಮವನ್ನು ಅಡಗಿಸಲು ಪ್ರಯತ್ನಿಸುತ್ತಿರುವಳು. ಈ ಸಂಘರ್ಷಣೆ ಇಲ್ಲದಿದ್ದರೆ ನಾವೆಲ್ಲರೂ ಒಂದೇ! ನಮ್ಮನಮ್ಮಲ್ಲಿ ಭೇದವಿಲ್ಲ. ದ್ವೇಷವೂ ಇಲ್ಲ" ಎಂದು ಬೋಧಿಸಿದರು.

ಗುರುವಾಜ್ಞೆ ಪ್ರಕಾರ ಪ್ರಿಯಶಿಷ್ಯನಾದ ಕನ್ಹಯ್ಯ ಆ ತೈಲದ ಡಬ್ಬಿಯನ್ನು ತೆಗೆದುಕೊಂಡು ಮಾನವ ಸೇವೆಮಾಡಿ ಮುಕ್ತಿ ಪಡೆಯಲು ಮತ್ತೆ ಯುದ್ಧರಂಗಕ್ಕೆ ಹೋದ.

ಮಿಕ್ಕ ಶಿಷ್ಯರು ಕನ್ಹಯ್ಯನನ್ನು ನೋಡಿ ಬೆರಗಾದರು. ಅವರೂ ಆತನ ಮಾರ್ಗವನು ಅನುಸರಿಸಲು ಪ್ರಯತ್ನಿಸಿದರು.



# 9ರ ಮಹತ್ತು

(1) 9ನೇ ಮಗ್ಗಿ ಬರೆ. ಪ್ರತಿ ಸಾಲಿನಲ್ಲಿ ಗುಣಿಸಿದರೆ ಬಂದ ಪ್ರತಿ ಮೊತ್ತದ ಕೊನೆಯಲ್ಲಿ ಸಾಲಾಗಿ 1 ರಿಂದ 10ರ ವರೆವಿಗೂ ಬರೆದು ಕೂಡು. ಬರುವ ಮೊತ್ತ ತುಂಬಾ ವಿಚಿತ್ರವಾಗಿರುತ್ತದೆ.

| | |
|---|---|
| $9 \times 1 = 9 + 1 = 10$ | $9 \times 6 = 54 + 6 = 60$ |
| $9 \times 2 = 18 + 2 = 20$ | $9 \times 7 = 63 + 7 = 70$ |
| $9 \times 3 = 27 + 3 = 30$ | $9 \times 8 = 72 + 8 = 80$ |
| $9 \times 4 = 36 + 4 = 40$ | $9 \times 9 = 81 + 9 = 90$ |
| $9 \times 5 = 45 + 5 = 50$ | $9 \times 10 = 90 + 10 = 100$ |

ಬಿ. ವೀರಣ್ಣ

(2) 9 ಅಂಕಿಯಿಂದ ಹಾಕಿದ ಈ ಗುಣಾಕಾರದ ಗಮ್ಮತ್ತು ನೋಡು :

```
  1122334455667789
                99
 -----------------
  10101010101010101
 10101010101010101
 ------------------
 111111111111111111
```

ವಿ. ಹನುಮಾಯಮ್ಮ

(3) 9 ಅಂಕಿಗೆ ಸಂಬಂಧಿಸಿದ ಮತ್ತೊಂದು ಗುಣಕಾರ :

$1 \times 9 + 2 = 11$
$12 \times 9 + 3 = 111$
$123 \times 9 + 4 = 1111$
$1234 \times 9 + 5 = 11111$
$12345 \times 9 + 6 = 111111$
$123456 \times 9 + 7 = 1111111$
$1234567 \times 9 + 8 = 11111111$
$12345678 \times 9 + 9 = 111111111$
$123456789 \times 9 + 10 = 1111111111$

ಡಿ. ಶೆಟ್ಟಿ, ಜಿ. ರಾವ್

(4) 696969 ಎಂಬ ಅಂಕಿಗೆ ಅದೇ ಸಂಖ್ಯೆಯನ್ನು ಸೇರಿಸು. ಮೊತ್ತ 1393938 ಬರುತ್ತೆ. ಇದರಲ್ಲಿ 969696 ಕಳೆ. 424242 ಉಳಿಯುತ್ತದೆ. ಇದಕ್ಕೆ 242424 ಸೇರಿಸು. ಆಗ 666666 ಬರುತ್ತದೆ. ಮೊದಲು ಹಾಕಿದ ಸಂಖ್ಯೆ 696969ರಲ್ಲಿ ಈ 666666ನ್ನು ಕಳೆದರೆ 30303 ಬರುವುದು. ಮತ್ತೆ ಈ ಸಂಖೆಯ ಅಂಕಿಗಳನ್ನು ಸೇರಿಸಿದರೆ $3 + 3 + 3 = 9$. ಬರುತ್ತದೆ.

ಎಲ್. ಆರ್. ರಾವ್




ಮುಂಡೂರು ಮೇವಾಡಸಂಸ್ಥಾನದ ರಾಜಧಾನಿ. ಜಯದೇವ ಆ ಸಂಸ್ಥಾನದ ಅಧಿಪತಿ. ಒಂದು ದಿನ ಆತನು ಒಡ್ಡೋಲಗದಲ್ಲಿರಲು ಚಾರಣನೊಬ್ಬನು ಬಂದು, ರಾಜನನ್ನು ಹೊಗಳಿ ಆಶುಕವಿತ್ವಮಾಡಿದ.

ಭಟ್ಟಂಗಿಗಳು ತಮ್ಮನ್ನು ಕುರಿತು ಹೊಗಳಿದರೆ ರಾಜರು ಸಂತೋಷಗೊಂಡು ಅವರನ್ನು ಗೌರವಿಸುವುದು ಪದ್ಧತಿ. ಆದರೆ ಜಯದೇವನಿಗೆ ಕವಿಗಳಿಂದರೂ, ಭಟ್ಟಂಗಿಗಳಿಂದರೂ ಹಾಗೆ ಹಾಗೇನೆ!

ಆದುದರಿಂದ ಆ ಚಾರಣನಿಗೆ ಬಹುಮಾನ ಕೊಡುವುದು ಹಾಗಿರಲಿ, ಆತನನ್ನು ಅವಮಾನಗೊಳಿಸಿ ಅಲ್ಲಿಂದ ಹೊರಗಟ್ಟಿಸಿದ.

ಆ ಭಟ್ಟಂಗಿ ಕುಪಿತನಾಗಿ ಮನಸ್ಸಿನಲ್ಲಿ ತೆಗಳುತ್ತಾ ಅಲ್ಲಿಂದ ನೆಟ್ಟಗೆ ಹಾರವಂಶದ ರಾಜಧಾನಿಯಾದ ಬುಮೋಡ ಪಟ್ಟಣಕ್ಕೆ ಹೋಗಿ ಸಿಂಹದ್ವಾರದ ಹತ್ತಿರ ಕಾದುಕೊಂಡು ಕುಳಿತಿದ್ದ. ಆ ಪಟ್ಟಣದ ರಾಜನ ಹೆಸರು ಅಲೂಹರ. ಆತನು ಬೇಟೆಗೆ ಹೋಗಿ ಹಿಂತಿರುಗಿ ಬರುತ್ತಿರುವನೆಂಬ ವಿಷಯ ತಿಳಿದು ಭಟ್ಟಂಗಿ ಕೋಟೆಯ ಹೊರಬಾಗಿಲಿನ ಹತ್ತಿರವೇ ಕಾದಿದ್ದ.

ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ಅಲೂಹರ ತನ್ನ ಪರಿವಾರದೊಂದಿಗೆ ಕೋಟೆಯನ್ನು ಪ್ರವೇಶಿಸುತ್ತಿರಲು ಭಟ್ಟಂಗಿ 'ರಾಜಮಾರ್ತಾಂಡ, ರಾಜಧಿರಾಜ, ಜಯೀಭವ, ದಿಗ್ವಿಜಯೀಭವ' ಎಂದು ಆಶೀರ್ವಾದ ಮಾಡಿದ.

ಅಲೂಹರ ಸಂತಸಗೊಂಡು "ಎಲೈ, ಏನು ಬೇಕೋ ಕೇಳಿಕೊಳ್ಳಯ್ಯಾ" ಎಂದ. ಧನವನ್ನೋ, ಬಂಗರವನ್ನೋ, ಇಲ್ಲ ಮುತ್ತು ಮಾಣಿಕ್ಯಗಳನ್ನೋ ಕೇಳುವನೆಂದು ಭಾವಿಸಿದ್ದನಾ ರಾಜ. ಆದರೆ ಆ ಭಟ್ಟಂಗಿ "ಸ್ವಾಮಿ ತಮ್ಮ ತಲೆಯ ರುಮಾಲನ್ನು ನನಗೆ ಕೊಡಿಸಿಕೊಡಬೇಕು" ಎಂದು ಕೇಳಿದ. ರಾಜನು ಚಕಿತನಾಗಿ, "ನನ್ನ ಪಗಡಿಯಿಂದ ನಿನಗೆ ಆಗುವ ಪ್ರಯೋಜನವಾದರೂ ಏನು? ಮುತ್ತು ಮಾಣಿಕ್ಯಗಳನ್ನು ಕೇಳುವುದು ಬಿಟ್ಟು

ರಾಮು ಮಿತ್ತಿಲ್ಲಾಯ, ಮಧೂರು



ಈ ಬಟ್ಟೆ ಬೇಕೆಂದು ಕೇಳುವೆಯಲ್ಲಾ, ಎಂತಹ ಹುಚ್ಚನಿರಬೇಕು ನೀನು" ಎಂದ ರಾಜ.

ಅದಕ್ಕೆ ಭಟ್ಟಂಗಿ "ಪ್ರಭೂ, ತಮ್ಮನ್ನು ನನ್ನ ತಲೆಯಮೇಲಿಟ್ಟುಕೊಂಡು ತಿರುಗಿಸ ಬೇಕೆಂದು ನನ್ನ ಅಭಿಲಾಷೆ. ಇದನ್ನು ಧರಿಸಿ ದೇಶವಿದೇಶಗಳಲ್ಲಿ ನಿಮ್ಮ ಕೀರ್ತಿ ಹರಡು ವಂತೆ ಮಾಡುವೆನು" ಎಂದ.

ಅಲೂಹರ ಆಡಿದ ಮಾತಿಗೆ ತಪ್ಪುವವನಲ್ಲ. ಏನು ಬೇಡಿದರೆ ಅದನ್ನು ಕೊಡುವನೆಂದು ಹೇಳಿದ್ದನಾದುದರಿಂದ ತನ್ನ ತಲೆಯ ರುಮಾ ಲನ್ನು ತೆಗೆದು ಭಟ್ಟಂಗಿಯ ಕೈಗೆ ಕೊಟ್ಟ. ತುರಾಯಿ ಮತ್ತು ಜರತಾರಿ ಚಿತ್ರ ಕೆಲಸ ದಿಂದ ಪ್ರಕಾಶಿಸುತ್ತಿದ್ದ ಆ ಪೇಟಾ ಧರಿಸಿ ಭಟ್ಟಂಗಿ, ಒಬ್ಬ ಮಹಾರಾಜನಂತೆ ಠೀವಿ ಯಿಂದ ಹೊರಟುಹೋದ.

ಆತನು ಆ ರೀತಿ ಹೋಗುತ್ತಿದ್ದರೆ ನೋಡಿ ದವರೆಲ್ಲ "ಇವನೊಬ್ಬ ಹುಚ್ಚ" ಎಂದು ಅಂದು ಕೊಂಡರು. ಅಂದು ಆ ಊರಿನ ಪ್ರತಿಪ್ರಜೆಯ ಬಾಯಲ್ಲೂ ಅದೇ ವಿಷಯ! ಕ್ರಮೇಣ ಈ ವಿಷಯವನ್ನು ಎಲ್ಲರೂ ಮರೆತುಹೋದರು.

ಕೆಲ ದಿನಗಳಾದ ಮೇಲೆ ಅಲೂಹರ ತುಂಬಿದ ಸಭೆಯಲ್ಲಿರಲು ಆ ಭಟ್ಟಂಗಿ ಸುಕ್ಕಾ ಗಿದ್ದ ಮುಂಡಾಸೊಂದನ್ನು ರಾಜನಮುಂದಿಟ್ಟು ಬಿಕ್ಕಿಬಿಕ್ಕಿ ಅಳಲು ಪ್ರಾರಂಭಿಸಿದ.

"ಏನಯ್ಯಾ, ಏಕೆ ಹೀಗೆ ಅಳುತ್ತಿರುವೆ?" ಎಂದು ಕೇಳಿದ ರಾಜ. ಅದಕ್ಕೆ ಭಟ್ಟಂಗಿ "ಏನೆಂದು ಹೇಳಲಿ? ಮಹಾರಾಜರಿಗೆ ನನ್ನಿಂದ ಅವಮಾನವಾಯಿತು" ಎಂದ.

"ಹಾಂ, ಏನು ನಡೆಯಿತು, ಸ್ಪಷ್ಟವಾಗಿ ಹೇಳು" ಕಾತುರವಿತ್ತು ರಾಜನ ಧ್ವನಿಯಲ್ಲಿ.

"ತಮ್ಮ ಪೇಟಾ ಧರಿಸಿ ಅನೇಕ ದೇಶ ಗಳನ್ನು ಸುತ್ತಿ, ಅನೇಕ ರಾಜರನ್ನು ಸಂದರ್ಶಿ ಸಿದೆ. ಅವರಿಗೆ ನಮಸ್ಕಾರ ಮಾಡುವ ಮೊದಲು ತಾವಿತ್ತ ಮುಂಡಾಸನ್ನು ತಲೆಯ ಮೇಲಿಂದ ತೆಗೆದು ಬಲಗೈಯಲ್ಲಿ ಹಿಡಿದು ಎಡಗೈಯಿಂದ ಸಲಾಂ ಹಾಕುತ್ತಿದ್ದೆ. ಯಾರಾದರೂ 'ಯಾಕೆ ಹಾಗೆ ಮಾಡಿದೆ?' ಎಂದು ಪ್ರಶ್ನಿಸಿದರೆ 'ಇದು ಅಲೂಹರ ಸಾರ್ವಭೌಮರ ಮುಂಡಾಸು. ಈ ಮುಂಡಾಸು ಇತರರಿಗೆ ಬಗ್ಗಿ ನಮಸ್ಕಾರ ಮಾಡುವುದಿಲ್ಲ' ಎಂದು ಹೇಳುತ್ತಿದ್ದೆ" ಎಂದ




ಆ ಭಟ್ಟಂಗಿ. ಈಮಾತು ಕೇಳಿ ಅಲೂಹರ ಸಂತಸಗೊಂಡ. ಸಭಿಕರೆಲ್ಲಾ 'ಭೇಷ್, ಚಾರಣ. ಮಹಾರಾಜರ ಗೌರವವನ್ನು ಉಳಿಸಿದೆ" ಎಂದು ಮೆಚ್ಚಿಕೊಂಡರು.

"ಆದರೆ ತಮ್ಮ ಗೌರವವನ್ನು ಕೊನೆಯ ವರೆವಿಗೂ ಉಳಿಸಲಾದರೆ ಹೋದೆ. ಮೇವಾಡದ ರಾಜನಾದ ಜಯದೇವನ ಆಸ್ಥಾನದಲ್ಲಿ ಪ್ರಭುಗಳ ಮುಂಡಾಸಿಗೆ ಅವಮಾನವಾಯಿತು"

"ಹಾಂ. ಏನಾಯಿತು?" ರಾಜ ಮತ್ತೆ ಪ್ರಶ್ನೆಮಾಡಿದ.

"ಯಥಾ ಪ್ರಕಾರ ತಲೆಯಮೇಲಿದ್ದ ಮುಂಡಾಸನ್ನು ತೆಗೆದು ನಾನು ನಮಾಸ್ಕಾರ ಮಾಡಲು, ಆತನು ಸಹ ಇತರ ರಾಜರು ಕೇಳಿದಂತೆ ಕೇಳಿದ. ನಾನೂ ಯಥಾ ರೀತಿ ಉತ್ತರ ಹೇಳಿದೆ. ಆದರೆ ಉಳಿದ ರಾಜರಂತೆ ತಮ್ಮ ಘನತೆಯನ್ನು ಗ್ರಹಿಸಿ ಸುಮ್ಮನಿರದೆ ಜಯದೇವನು ಕೆರಳಿ ಸಿಂಹಾಸನದಿಂದ ಇಳಿದುಬಂದು ನನ್ನ ಕೈಯಲ್ಲಿದ್ದ ಪ್ರಭುಗಳ ಮುಂಡಾಸನ್ನು ಕಾಲಿಂದ ಒದ್ದು, ನನ್ನನ್ನು ಹೊರಗೆ ಅಟ್ಟಿದ" ಎಂದು ರಾಜನ ಮನಸ್ಸಿಗೆ ನಾಟುವಂತೆ ನುಡಿದ.

ಈ ಮಾತು ಕೇಳಿ ಅಲೂಹರ ರೊಚ್ಚಿಗೆದ್ದ. ಸಭಾ ಭವನದಲ್ಲಿ ನೆರೆದಿದ್ದವರೆಲ್ಲಾ "ನಮ್ಮ ಪ್ರಭುಗಳಿಗೆ ಅವಮಾನ ಮಾಡಿದ ಆ ಜಯದೇವನಿಗೆ ಬುದ್ಧಿ ಕಲಿಸಬೇಕು" ಎಂದು ಚಡಪಡಿಸಿದರು. "ಸೈನವನ್ನು ಕಳುಹಿಸಬೇಕು. ಜಯದೇವನ ಸೊಕ್ಕು ಮುರಿಯಬೇಕು" ಎಂದು ಆವೇಶದಿಂದ ಕೂಗಾಡಿದರು.

ಸಭೆಯಲ್ಲಿದ್ದ ವೃದ್ಧ ಮಂತ್ರಿ "ಬಟ್ಟೆಯೊಂದರ ವಿಷಯವಾಗಿ ನೆರೆರಾಜನೊಂದಿಗೆ ಜಗಳವೇಕೆ?" ಎಂದ. ಆದರೆ ಆ ಗೊಂದಲದಲ್ಲಿ ಆತನ ಮಾತನ್ನು ಯಾರು ಕೇಳುವರು?

ಅಲೂಹರನೇ ಸ್ವತಃ ಸೈನ್ಯದೊಂದಿಗೆ ಮೇವಾಡದ ರಾಜಧಾನಿಯಾದ ಮಂಡೂರನ್ನು ಮುತ್ತಿದ. ಜಯದೇವನಿಗೂ ಅಲೂಹರನಿಗೂ ಭಾರಿ ಕದನವಾಯಿತು. ಜಯದೇವ ಯುದ್ಧದಲ್ಲಿ ಮರಣಿಸಿದ. ಮಂಡೂರ ಅಲೂಹರನ ವಶವಾಯಿತು. ಮುಯ್ಯಿಗೆ ಮುಯ್ಯಿ ತೀರಿತೆಂದು ಭಟ್ಟಂಗಿ ಮನದಲ್ಲಿ ಸಂತೋಷಿಸಿದನು.



# ಅಪೂರ್ವ ಸಾಹಸಿ

ಪ್ರತಿಭಾವಂತರಾದ ರಾಜರು ಆಳಿದ ಉಜ್ಜಯಿನಿ ನಗರವನ್ನು ಒಂದು ಕಾಲದಲ್ಲಿ ಅನೀತಿವಂತನಾದ ರಾಜನು ಆಳುತ್ತಿದ್ದನು. ಆತನು ಅಸಮರ್ಥನೂ ಹೌದು. ಆತನ ದುರಾಚಾರಗಳನ್ನು ಸಹಿಸಲಾರದೆ ಕೆಲ ಪ್ರಜೆಗಳು ಒಟ್ಟುಗೂಡಿ ರಾಜನಮೇಲೆ ದಂಗೆ ಎದ್ದರು. ಪ್ರಜೆಗಳ ಆಗ್ರಹಕ್ಕೆ ಹೆದರಿ ದುಷ್ಟನಾದ ಆ ರಾಜನು ಉಜ್ಜಯಿನಿ ನಗರವನ್ನು ಬಿಟ್ಟು ಎಲ್ಲಿಗೋ ಓಡಿ ಹೋದನು.

ಉಜ್ಜಯಿನಿ ಸಮೀಪದಲ್ಲಿ ನರ್ಮದಾ ನದಿ ಹರಿಯುತ್ತದೆ. ಆ ನದಿಯ ಆಚೆ ದಡದ ನಾಡನ್ನು ರಾಜಮಾರ್ತಾಂಡನು ಪರಿಪಾಲಿಸುತ್ತಿದ್ದನು. ರಾಜಭ್ರಷ್ಟನಾದ ಉಜ್ಜಯಿನಿ ರಾಜನು ರಾಜಮಾರ್ತಾಂಡನ ಮೊರೆ ಹೊಕ್ಕನು. ರಾಜಮಾರ್ತಾಂಡನಿಗೆ ಇವನ ನಿಜಗುಣಗಳು ತಿಳಿಯದು. ಆದುದರಿಂದ ಆತನಿಗೊದಗಿದ ಕಷ್ಟವನ್ನು ಕಂಡು ಮರುಕಪಟ್ಟು, ಉಜ್ಜಯಿನಿಯನ್ನು ಜಯಿಸಲು ತನ್ನ ಸೈನ್ಯದೊಂದಿಗೆ ಸಿದ್ಧವಾದ.

ಇಷ್ಟರಲ್ಲಿ ಉಜ್ಜಯಿನಿಯಲ್ಲಿ ಪ್ರಜಾರಾಜ್ಯವೇರ್ಪಟ್ಟಿತು. ದೇಶದಲ್ಲಿದ್ದ ಹಿರಿಯರು, ಕಿರಿಯರು, ಯುವಕರು, ಯೋಧರು ಎಲ್ಲಾ ಸೇರಿ ಹೊಸ ಪ್ರಭುತ್ವವನ್ನು ಬಲಗೊಳಿಸಿದರು. ಅಕ್ರಮವಾದ ಶಾಸನಗಳು ರದ್ದಾದವು. ವೃತ್ತಿವಾಣಿಜ್ಯಗಳು ಸಕ್ರಮವಾಗಿ, ಅಧಿಕಾರಿಗಳ ಜುಲುಂ ಇಲ್ಲದೆ ಸುಸೂತ್ರವಾಗಿ ಸಾಗುತಿತ್ತು. ಪ್ರಜೆಗಳಿಗೆ ಚೋರಭಯ, ಪ್ರಾಣಭಯಗಳು ಇಲ್ಲವಾದವು. ತಮಗೊಂದು ನೂತನಬಾಳು ಪ್ರಾಪ್ತವಾಯಿತೆಂದು ಪ್ರಜೆಗಳು ಹಿರಿಹಿರಿ ಹಿಗ್ಗಿದರು.

ಈ ಸಮಯದಲ್ಲಿ ರಾಜಮಾರ್ತಾಂಡನು ತಮ್ಮಮೇಲೆ ಯುದ್ಧಕ್ಕೆ ಬರಲು ಸನ್ನದ್ಧನಾಗುತ್ತಿರುವನೆಂದು ಬೇಹುಗಾರರಮೂಲಕ ಉಜ್ಜಯಿನಿ ಪ್ರಜೆಗಳಿಗೆ ತಿಳಿಯಿತು. ದೇಶದ ಪರಿಪಾಲನೆಗೆ ಆರಿಸಲ್ಪಟ್ಟ ಹಿರಿಯರೂ, ಅವರಿಗೆ ಬೆಂಬಲವಾಗಿದ್ದ ಯುವಕರೂ ಈ ಸುದ್ದಿ ಕೇಳಿ ಕಂಗೆಟ್ಟರು. ಉಜ್ಜಯಿನಿಯ

ಪದ್ಮಾ ಸುರೇಶರಾವ್, ಹೈದ್ರಾಬಾದು

ಸೈನ್ಯದ ಸಂಖ್ಯೆ ಅತಿಸ್ವಲ್ಪ. ರಾಜ ಮಾರ್ತಾಂಡನು ಯುದ್ಧದಲ್ಲಿ ಆರಿತುನುರಿತವನು. ಸೈನ್ಯಜಮಾವಣೆ ಮಾಡಲಾದರೂ ಉಜ್ಜಯಿನಿ ಪ್ರಜೆಗಳಿಗೆ ವ್ಯವಧಿಯಿರಲಿಲ್ಲ.

ತುರ್ತುಸಭೆ ನಡೆಯಿಸಿದರು. ಪ್ರತಿಯೊಬ್ಬ ಯುವಕನೂ ಸಭೆಯಲ್ಲಿ ಹಾಜರಾದನು. ಉಜ್ಜಯಿನಿಯನ್ನು ರಕ್ಷಿಸಬೇಕೆಂದು ಎಲ್ಲರೂ ಸೇರಿ ನಿರ್ಣಯಿಸಿದರು. "ಉಜ್ಜಯಿನಿಯನ್ನು ಯಾರು ರಕ್ಷಿಸುತ್ತಾರೆ? ಹೇಗೆ ರಕ್ಷಿಸುತ್ತಾರೆ? ಮುಂದೆ ಬಂದು ಹೇಳಿ" ಎಂದರು ಹಿರಿಯರು.

ಯುವಕರಲ್ಲಿ ವಿಕ್ರಮನೆಂಬುವನು ಮುಂದೆ ಬಂದು "ಇಪ್ಪತ್ತು ಜನ ಯೋಧರನ್ನು ನನಗೆ ಕೊಡಿ. ನಾನು ರಕ್ಷಿಸುವೆನು" ಎಂದು ನುಡಿದ. ಈ ಮಾತನ್ನು ಕೇಳಿ ಅಲ್ಲಿದ್ದವರೆಲ್ಲಾ ಆಶ್ಚರ್ಯಹೊಂದಿದರು. ಇಪ್ಪತ್ತು ಸಾವಿರ ಅನುಭವಜ್ಞ ಸೈನಿಕರನ್ನು ಈ ವಿಕ್ರಮನು ಇಪ್ಪತ್ತು ಜನ ಯೋಧರ ಸಹಾಯದಿಂದ ಹೇಗೆತಾನೇ ಎದುರಿಸಿ ಸೋಲಿಸುವನು? ಇದು ಸಾಧ್ಯವೇ?

ಅವರ ಸಂಶಯವನ್ನು ದೂರಮಾಡಲು ವಿಕ್ರಮನು ಈ ರೀತಿ ಹೇಳಿದ: "ರಾಜಾಮಾರ್ತಾಂಡನ ಸೈನ್ಯ ಉಜ್ಜಯನಿಗೆ ಬರಲು ಒಂದೇ ಒಂದು ಮಾರ್ಗವಿದೆ. ನರ್ಮದಾ ನದಿಯ ಸೇತುವೆಯ ಮೇಲಿಂದಲೇ ಬರಬೇಕು. ಆ ಸೇತುವೆ ತೀರಾ ಕಿರಿದಾದುದರಿಂದ ಒಬ್ಬರ ಹಿಂದೆ ಒಬ್ಬರು ಮಾತ್ರ ಬರಲು ಸಾಧ್ಯ. ಸೇತುವೆಯಮೇಲಿರುವ



ಸ್ತಂಭಗಳ ಹಿಂದೆ ನಮ್ಮ ಯೋಧರು ನಿಂತುಕೊಂಡರೆ ಒಂದು ಹುಳವಾದರೂ ದಾಟಿ ಬರಲು ಸಾಧ್ಯವಿಲ್ಲದಂತೆ ಮಾಡಬಹುದು. ಅಗತ್ಯಬಿದ್ದರೆ ನಮ್ಮ ಯೋಧರು ಆ ಸೇತುವೆಯನ್ನು ಕೆಡವಬಹುದು. ಆದುದರಿಂದ ನಾವು ರಾಜಾಮಾರ್ತಾಂಡನ ಅಗಾಧವಾದ ಸೈನ್ಯಬಲವನ್ನು ಕುರಿತು ಹೆದರಬೇಕಾಗಿಲ್ಲ, ಚಿಂತಿಸಬೇಕಾಗಿಲ್ಲ."

ಈ ಮಾತುಗಳನ್ನು ಕೇಳಿ ಎಲ್ಲರೂ ಹರ್ಷಭರಿತರಾದರು. ಇಪ್ಪತ್ತು ಜನ ಯೋಧರು ತಾವು ವಿಕ್ರಮನ ಸಂಗಡ ಹೋಗಲು ಮುಂದೆ ಬಂದರು. ಅವರಿಗೆ ಕತ್ತಿಕಠಾರಿಗಳನ್ನೂ, ಗಂಡುಗೊಡಲಿಗಳನ್ನೂ ಕೊಡಿಸಿಕೊಟ್ಟು ವಿಕ್ರಮನು ಆದಷ್ಟು ಬೇಗ ನರ್ಮದಾನದಿ ತೀರ



ವನ್ನು ಸೇರಿದನು. ಸೇತುವೆಯ ಸ್ತಂಭಗಳ ಹಿಂದೆ ತಾವು ನಿಂತುಕೊಳ್ಳಲು ತಕ್ಕ ಏರ್ಪಾಟುಗಳನ್ನು ಮಾಡಿಕೊಂಡರು. ಸೇತುವೆಯಮೇಲೆ ನಡೆಯುವವರನ್ನು ಇವರು ಸುಲಭವಾಗಿ ಸಂಹರಿಸಲು ಶಕ್ಯವಿದೆ. ಆದರೆ ಈ ಯೋಧರು ನಡೆಯುವವರ ಕೈಗೆ ಸಿಕ್ಕಲು ಮಾತ್ರ ಸಾಧ್ಯವಿಲ್ಲ.

ಸೂರ್ಯೋದಯವಾದ ಕೂಡಲೇ ರಾಜಾ ಮಾರ್ತಾಂಡನ ಸೈನಿಕರು ಸೇತುವೆಯನ್ನು ದಾಟಲು ಪ್ರಯತ್ನಿಸಿದರು. ಸೇತುವೆಯ ಮೇಲೆ ಎಲ್ಲರಿಗಿಂತಲೂ ಮುಂದೆ ನಿಂತಿದ್ದ ವಿಕ್ರಮ. ಮೊದಲು ಸೇತುವೆ ಹತ್ತಿ ಬಂದವರನ್ನು ವಿಕ್ರಮನು ತನ್ನ ಕತ್ತಿಗೆ ಬಲಿಕೊಡುತ್ತಿದ್ದ. ರಾಜಾಮಾರ್ತಾಂಡನ ಸೈನಿಕರು ಬೆರ



ಗಾಗಿ ಈ ಅದೃಶ್ಯ ಮೃತ್ಯುವನ್ನು ಅರ್ಥಮಾಡಿಕೊಳ್ಳದಾದರು. ಅದರ ಗುಟ್ಟನ್ನು ತಿಳಿಯಲು ಮುಂದೆ ಬಂದವರೂ ಸಹ ವಿಕ್ರಮನ ಕತ್ತಿಗೆ ಬಲಿಯಾದರು. ಉಳಿದವರು ಹೆದರಿ ಹಿಂದಕ್ಕೆ ಓಡಿದರು

ಈ ವಿಷಯ ಕೇಳಿದ ಕೂಡಲೇ ರಾಜ ಮಾರ್ತಾಂಡನು ನಿರ್ಭ್ರಾಂತನಾದನು. ಸೇತುವೆಯಲ್ಲಿ ರಹಸ್ಯವಾಗಿ ಅಡಗಿಕೊಂಡು ತನ್ನ ಸೈನಿಕರನ್ನು ಕೊಲ್ಲುತ್ತಿದ್ದ ಯೋಧರ ಹುಟ್ಟಡಗಿಸಲು ಆತನು ಅನೇಕ ಉಪಾಯಗಳನ್ನು ಯೋಚಿಸಿದ. ನದಿ ಈಜಲು, ಸಣ್ಣ ಸಣ್ಣ ದೋಣಿಗಳ ಮುಖಾಂತರ ನದಿ ದಾಟಲು ಅನೇಕಮಂದಿ ಸೈನಿಕರು ಪ್ರಯತ್ನಿಸಿದರು. ಆದರೆ ಪಾಪ, ಅವರು ಅರ್ಧ ದಾರಿಯಲ್ಲಿರುವಾಗಲೇ ಆಚೆದಡದ ಮರಗಳ ಹಿಂದಿನಿಂದ ಪೊದೆಗಳ ಹಿಂದಿನಿಂದ ಬಾಣಗಳು ಬಂದು ಅವರನ್ನು ನದಿಯ ಪಾಲು ಮಾಡಿದವು.

ಸೇತುವೆಯನ್ನು ರಕ್ಷಿಸುತ್ತಿದ್ದ ಯೋಧರ ಸ್ಥಿತಿಯೂ ಅಷ್ಟೇನು ಸುರಕ್ಷಿತವಾಗಿರಲಿಲ್ಲ. ಏಕೆಂದರೆ ರಾಜಮಾರ್ತಾಂಡನ ಸೈನಿಕರು ಸತ್ತುಬಿದ್ದಿದ್ದ ಸೈನಿಕರ ಶವಗಳನ್ನು ಅಡ್ಡವಿಟ್ಟುಕೊಂಡು ಯೋಧರ ಕತ್ತಿ ಏಟುಗಳನ್ನು ತಪ್ಪಿಸಿಕೊಂಡು ಸೇತುವೆಯಮೇಲೆ ತುಸ ದೂರ ಸಾಗಿ ಹೋದರು. ಸ್ತಂಭಗಳ ಹಿಂದಿದ್ದ ಯೋಧರು ಕೆಲವರನ್ನು ಮಾತ್ರವೇ ಕೊಲ್ಲಲು ಸಾಧ್ಯವಾಯಿತು. ಇನ್ನೂ ಸೈನಿಕರ ತಂಡಗಳು ಉಳಿದಿವೆ. ಮಾರ್ತಾಂಡನ ಸೈನಿಕರು ತಮ್ಮ ಪ್ರಾಣ






ವನ್ನು ಲಕ್ಷಿಸದೆ ಮುನ್ನುಗ್ಗಿದರೆ ಆ ಸೇತುವೆ ಅವರ ವಶವಾಗುವುದು ಖಂಡಿತವೆಂದು ಗ್ರಹಿಸಿದ ವಿಕ್ರಮ. ಮಾರ್ತಾಂಡನ ಸೈನ್ಯ ತಮ್ಮ ಜೀವವನ್ನು ಲಕ್ಷ ಮಾಡುವಂತೆ ತೋರಲಿಲ್ಲ.

ಆದುದರಿಂದ ವಿಕ್ರಮನು ತನ್ನ ಅನುಚರರಿಗೆ ಹಿಂದಿನಿಂದ ಸೇತುವೆಯನ್ನು ಕೆಡವಿಕೊಂಡು ಬರಬೇಕೆಂತಲೂ, ಸೇತುವೆಬಿದ್ದು ಹೋಗುವ ಸಮಯಕ್ಕೆ ಸರಿಯಾಗಿ ಹಿಂದಿರುವವರು ಹಾಗೇ ಹಿಂದಕ್ಕೆ ಹೊರಟುಹೋಗಬೇಕೆಂದೂ ಸೂಚಿಸಲು ವಿಕ್ರಮನ ಹೊರತು ಮಿಕ್ಕೆಲ್ಲ ಯೋಧರು ಸೇತುವೆಯನ್ನು ಧ್ವಂಸ ಮಾಡುತ್ತಾ ಅದು ಬಿದ್ದುಹೋಗುವ ಸಮಯಕ್ಕೆ ಆಚೆ ದಡವನ್ನು ಸೇರಿಕೊಂಡರು. ತುಸ ಹೊತ್ತಿಗೆಲ್ಲಾ ಆ ಸೇತುವೆ ಕಳಚಿಕೊಂಡು ನರ್ಮದಾನದಿಯಲ್ಲಿ ಬಿದ್ದು ಕೊಚ್ಚಿಕೊಂಡು ಹೋಯಿತು.

ವಿಕ್ರಮನ ಹೊರತು ಉಳಿದವರೆಲ್ಲಾ ಆಚೆ ದಡ ಸೇರಿಕೊಂಡಿದ್ದರಷ್ಟೆ! ರಾಜಮಾರ್ತಂಡನ ಸೈನಿಕರು ವಿಕ್ರಮನನ್ನು ಸುತ್ತುಗಟ್ಟಿ ಅವನನ್ನು ಬಂಧಿಸಿದರು. ಅಂದು ರಾತ್ರಿ ರಾಜಮಾರ್ತಾಂಡನೂ ಆತನ ಮುಖ್ಯ ಅನುಚರರೂ ಗುಡಾರಗಳ ನಡುವೆ ಬೆಂಕಿ ಕಾಯಿಸಿಕೊಳ್ಳುತ್ತಾ ಯಾವುದೋ ವಿಷಯವನ್ನು ಚರ್ಚಿಸುತ್ತಿದ್ದರು. ಆಗ ರಾಜಭಟರು ವಿಕ್ರಮನನ್ನು ಹಗ್ಗದಿಂದ ಬಿಗಿದು ಕಟ್ಟಿ ಅಲ್ಲಿಗೆ ಕರೆತಂದರು. ಆ ಬೆಂಕಿಯ ಜ್ವಾಲೆಗೆ ವಿಕ್ರಮನು ಮತ್ತಷ್ಟು ತೇಜಸ್ವಿಯಾಗಿ ಕಂಡನು. "ನಾನು ಹೇಡಿಯಲ್ಲ. ಓಡಿಹೋಗುವುದಿಲ್ಲ. ನನ್ನನ್ನು ಕಟ್ಟುಗಳಿಂದ ಬಿಡಿಸಿ" ಎಂದ ವಿಕ್ರಮ.

"ಕಂಬಗಳ ಹಿಂದೆ ನಿಂತು ಶತ್ರು ಸಂಹಾರ ಮಾಡಿದ ನೀನು ಶೂರನೇ? ಧೀರನೇ?" ಎಂದ ರಾಜಮಾರ್ತಾಂಡ ಹಲ್ಲು ಕಟಕಟನೆ ಕಡಿಯುತ್ತಾ.

"ಅಧರ್ಮ ಯುದ್ಧಕ್ಕೆ ನಿಯಮಗಳೆಲ್ಲಿಯದು?"

"ನನ್ನದು ಅಧರ್ಮ ಯುದ್ಧವೆ?"

"ಹೌದು, ನೂರು ಸಲ ಹೌದು. ಸಾವಿರ ಸಲ ಹೌದು. ನೀವು ನಮ್ಮ ಮೇಲೆ ಯುದ್ಧ ಹೂಡುವುದಾಗಿ ತಿಳಿಸಿದಿರೇನು?"

"ಅರಾಜಕ ದೇಶದ ಮೇಲೆ ಯುದ್ಧ ಪ್ರಕಟನೆ ಏನು ಬಂತು?"

" ನಮ್ಮ ದೇಶಕ್ಕೆ ಪ್ರಜೆಗಳೇ ರಾಜರು. ನಮ್ಮದು ಪ್ರಜಾರಾಜ್ಯ"

" ಪ್ರಜಾರಾಜ್ಯ ಒಂದು ರಾಜ್ಯವಲ್ಲ. ಅದು ಬಹುದಿನ ನಿಲ್ಲಲಾರದು"

" ನಾವು ನಮ್ಮ ರಾಜ್ಯವನ್ನು ಉಳಿಸಿ ಕೊಳ್ಳುವೆವು. ನನ್ನ ಕೈಗಳ ಬಂಧನ ಬಿಡಿಸಿ; ನಾನು ನಿಮ್ಮೊಂದಿಗೆ ಮಾತನಾಡುವುದಿದೆ" ಎಂದ ವಿಕ್ರಮ.

ರಾಜಮಾರ್ತಾಂಡನು ಆತನ ಕಟ್ಟು ಬಿಚ್ಚಿಸಿ, ಪಕ್ಕದಲ್ಲಿ ಕೂರಿಸಿಕೊಂಡ.

" ನಾನು ನಿಮ್ಮ ರಾಜ್ಯವನ್ನು ನಿಮಿಷ ಮಾತ್ರದಲ್ಲಿ ನಾಶಮಾಡಬಲ್ಲೆ. ನಿನ್ನಂತಹ ಅಂಜುಕುಳಿಗಳು ನನಗೊಂದು ಲಕ್ಷವಲ್ಲ. ನಿಮಗೊಬ್ಬ ರಾಜನು ಏರ್ಪಡಾಗುವ ವರೆವಿಗೆ ನಿಮ್ಮದೊಂದು ರಾಜ್ಯವೆಂದು ನಾನು ಪರಿಗಣಿಸಲಾರೆ" ಎಂದ ರಾಜ ಮಾರ್ತಾಂಡ.

" ನಮ್ಮ ರಾಜ್ಯದಲ್ಲಿ ನನ್ನಂತಹವರೂ ನನ್ನನ್ನು ಮೀರಿಸಿದ ಯುವಕರೂ ಬಹಳಜನ ರಿದ್ದಾರೆ. ಅವರು ತಮ್ಮ ಪ್ರಾಣವನ್ನಾದರೂ ತೆತ್ತು ರಾಜ್ಯವನ್ನು ಕಾಪಾಡುವರು. ಅವರ ಸಾಹಸವೆಂತಹುದೆಂಬುದನ್ನು ಉದಾಹರಣೆಗೆ ನಿಮಗೀಗತೋರಿಸವೆನು" ಎಂದು ವಿಕ್ರಮ ತನ್ನ ಬಲಗೈಯನ್ನು ಧಗಧಗನೆ ಉರಿಯುತಿದ್ದ ಬೆಂಕಿಯೊಳಕ್ಕೆ ಚಾಚಿದ.

ಕ್ಷಣಮಾತ್ರದಲ್ಲಿ ಆತನ ಕೈ ಸುಡಲು ಪ್ರಾರಂಭಿಸಿತು. ಆದರೂ ವಿಕ್ರಮನು ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳಲಿಲ್ಲ. ಸುಡುತ್ತಿದ್ದ ಕೈಯನ್ನು ನೋಡುತ್ತಾ ವಿಕ್ರಮನು " ನಾವು ಸಾಹಸವಂತರು. ಚಿತ್ರಹಿಂಸೆ ಮಾಡಿದರೂ ನಮ್ಮನ್ನು ನೀವು ಜಯಿಸಲಾರಿರಿ. ನಮ್ಮ ರಾಜ್ಯವನ್ನು ಕಾಪಾಡಲು ಎಷ್ಟೇ ತ್ಯಾಗ ವನ್ನಾದರೂ ಮಾಡಲು ನಾವು ಸಿದ್ಧರಿದ್ದೇವೆ" ಎಂದುನುಡಿದ.

ವಿಕ್ರಮನ ಸಾಹಸಕ್ಕೆ, ದೃಢನಿಶ್ಚಯಕ್ಕೆ ರಾಜಮಾರ್ತಾಂಡನು ಅವಾಕ್ಕಾದ. ಮಾರ ನೆಯ ದಿನವೇ ಸೇನೆಯೊಂದಿಗೆ ತನ್ನ ರಾಜ್ಯಕ್ಕೆ ಹಿಂದಿರುಗಿದ.



## ಉತ್ತರ ಹೇಳು

(1) ಪ್ರಪಂಚದಲ್ಲೆಲ್ಲಾ ಬೆಲೆ ಬಾಳುವ ಲೋಹ ಯಾವುದು?

(2) ರೆಂಬೆಗಳಿಲ್ಲದಿರುವ ಮೂರು ಮರಗಳು ಯಾವುವು?

(3) ಮೊತ್ತಮೊದಲು ಪ್ರಪಂಚ ಪಟವನ್ನು ತಯಾರಿಸಿದವರು ಯಾರು?

(4) ಕಪಿ ಜಾತಿಯಲ್ಲಿ ದೊಡ್ಡದಾವುದು?

(5) ಎತ್ತು ಏಳುವ ಮೊದಲು ಯಾವ ಕಾಲುಗಳು ಕದಲಿಸುತ್ತದೆ?

(6) ಹೂ ಬಿಡದೆ ಕಾಯಿಗಳು ಬಿಡುವ ಮರಗಳು ಯಾವುವು?

(7) ಬಟ್ಟೆ ಒಗೆಯುವ ಸೋಡಾ ಯಾವುದರಿಂದ ತಯಾರಾಗುತ್ತದೆ?

(8) ಆಟಂಬಾಂಬ್ ಕಂಡುಹಿಡಿದವರು ಯಾರು?

(9) ಒಂದು ನಿಮಿಷದಲ್ಲಿ ನಾವೆಷ್ಟುಸಾರಿ ಉಸಿರು ಎಳೆಯುವೆವು?

(10) ಎರಡು ಸೇರು ನೀರಿಗೆ ಒಂದು ಸೇರು ಉಪ್ಪು ಸೇರಿದರೆ ಎಷ್ಟು?

(11) ಒಲಂಪಿಕ್ ಪಂದ್ಯಗಳನ್ನು ಪ್ರಾರಂಭಿಸಿದವರು ಯಾರು?

---

1. ರೇಡಿಯಂ. 2. ತೆಂಗಿನ ಮರ, ಈಚಲು, ತಾಳ ವೃಕ್ಷ. 3. ತಾಲಮೀ. 4. ಸಿಫೆನ್ಸಿ. 5. ಹಿಂದಿನ ಕಾಲುಗಳು. 6. ಅನಾಸು, ಅತ್ತಿ, ಆಲ್. 7. ಸಾಧಾರಣ ಉಪ್ಪಿನಿಂದ. 8. ಅಟೋ ಹಾ೯. 9. 25 ಸಾರಿ. 10. ಎರಡು ಸೇರೇ. 11. ಗ್ರೀಕರು.

## 'ಪಿಚ್ಚರ್'

ಇದೊಂದು ವಿಚಿತ್ರವಾದ ಟೊಂಗೆ. ಇದಕ್ಕೆ ಹಸಿವು ಹೆಚ್ಚು. ಬೇರಿನ ಮೂಲಕ ಭೂಮಿಯಿಂದ ತೆಗೆದುಕೊಳ್ಳುವ ಆಹಾರ ಸಾಲದೆ ಇದು ಮಾಂಸಾಹಾರವನ್ನೂ ಮಾಡುತ್ತದೆ. ಹಾಗೆ ತಿನ್ನಲು ತಕ್ಕ ಸಾಧನ ಈ ಟೊಂಗೆಯಲ್ಲೇ ಇದೆ. ಕೆಳಗಿರುವ ಚಿತ್ರ ನೋಡಿ. ಪ್ರತಿ ಎಲೆಯಿಂದ ಒಂದೊಂದು ತಾಳೆಗೂ ಒಂದು ವಿಚಿತ್ರವಾದ ಚೀಲವಿದೆ. ಪ್ರತಿ ಚೀಲದ ಮೇಲು ಭಾಗದಲ್ಲೂ ಒಂದು ತಟ್ಟೆಯಂತಹ ಮುಚ್ಚಳವಿರುತ್ತದೆ.



ಯಾವುದಾದರೂ ಹುಳ ಬಂದು ಆ ಚೀಲದ ಮೇಲೆ ಎಗರಿದ ಕೂಡಲೇ ಟಸ್ ಎಂದು ಆ ತಟ್ಟೆ ಮುಚ್ಚಿಕೊಳ್ಳುವುದು. ಹುಳ ಹೊರಕ್ಕೆ ಬರಲಾಗುವುದಿಲ್ಲ. ಈ ರೀತಿ ಆ ಹುಳವನ್ನು ಕಬಳಿಸುವುದು ಈ ಪಿಚ್ಚರ್ ಎಂಬ ಗಿಡ.

ಇವು ಅಮೆರಿಕಾ ಮತ್ತು ನಮ್ಮ ದೇಶದಲ್ಲಿ ವಿಶೇಷವಾಗಿವೆ.



# ಕಾವೇರಿ ನದಿ

ಪೂರ್ವಕಾಲದಲ್ಲಿ ಶೂರಪದ್ಮನೆಂಬ ಬ್ರಹ್ಮ ರಾಕ್ಷಸನಿದ್ದನು. ಅವನು ಮಹಾ ಬಲಶಾಲಿ. ಅಷ್ಟೇ ಕ್ರೂರಿ. ಅವನ ದಬ್ಬಾಳಿಕೆಯನ್ನು ತಾಳಲಾರದೆ ಸಮಸ್ತ ಲೋಕಗಳೂ ಗಡಗಡ ನಡುಗುತ್ತಿದ್ದುವು. ದೇವತೆಗಳೂ ಸಹ ಹೆದರುತ್ತಿದ್ದರು.

ದೇವತೆಗಳು ಮಾತ್ರವೇ ಅಲ್ಲ. ದೇವೇಂದ್ರ ಸಹ ಆ ರಾಕ್ಷಸನ ಕಣ್ಣಿಗೆ ಬೀಳದಂತೆ ತಲೆ ತಪ್ಪಿಸಿಕೊಳ್ಳಬೇಕಾದ ಸನ್ನಿವೇಶ ಒದಗಿತ್ತು. ಆಗ ದೇವೇಂದ್ರನು ಭೂಲೋಕಕ್ಕೆ ಬಂದು ಯಾರೂ ತನ್ನನ್ನು ಗುರ್ತಿಸದಂತಿರಲು ಒಂದು ಬಿದುರು ಪೊದೆಯಾಗಿ ಅವತರಿಸಿದ.

ಸ್ವಲ್ಪಕಾಲವಾದ ನಂತರ ಬೇಸಿಗೆ ಬಂತು. ಅಡವಿಯಲ್ಲಿದ್ದ ಮರಗಿಡಗಳೆಲ್ಲಾ ಒಣಗಿ ಹೋದವು. ಆದರೆ ದೈವಾಂಶ ಸಂಭೂತನಾದ ಆ ಬಿದುರು ಪೊದೆ ಮಾತ್ರ ಹಸುರಾಗಿಯೇ ಇದೆ. ಆಗ ದೇವೇಂದ್ರನು ಹೀಗೆಂದು ಯೋಚಿಸಿದ :

“ಈ ಉರಿಯುವ ಬಿಸಿಲಿನಲ್ಲಿ ಜೊತೆ ಮರಗಿಡಗಳೆಲ್ಲಾ ಬಾಡಿಹೋಗಲು, ನಾನು ಮಾತ್ರ ಹಚ್ಚಹಸುರಾಗಿರುವುದು ಸೋಜಿಗವಲ್ಲವೇ? ಇದರಿಂದ ನನ್ನ ಇರವು ಸುಲಭವಾಗಿ ತಿಳಿಯಬಹುದು. ಆದುದರಿಂದ ನನ್ನ ಶಕ್ತಿಸಾಮರ್ಥ್ಯಗಳಿಂದ ಗಂಗೆಯನ್ನು ಭೂಲೋಕಕ್ಕೆ ಬರಮಾಡಿದರೆ ನನ್ನ ರಹಸ್ಯವು ಬಯಲಾಗದು. ಪರಮೇಶ್ವರನನ್ನು ಆರಾಧಿಸಲೂ ಸಾಧ್ಯವಾಗುವುದು”

ಹೀಗೆ ನಿಶ್ಚಯಿಸಿ ದೇವೇಂದ್ರನು ವಿನಾಯಕನನ್ನು ಪ್ರಾರ್ಥಿಸಿದ. ವಿನಾಯಕನು ಪ್ರತ್ಯಕ್ಷನಾದ. ಇಂದ್ರನು ತನ್ನ ಅಭಿಲಾಷೆಯನ್ನು ವ್ಯಕ್ತಪಡಿಸಿದ.

ಗಣಪತಿ ದೇವೇಂದ್ರನ ಅಭೀಷ್ಟವನ್ನು ಈಡೇರಿಸಲು ಮನಸ್ಸು ಮಾಡಿದ. ಆಗ ಲೋಕದಲ್ಲೆಲ್ಲಾ ನೀರು ಬತ್ತಿಹೋಗಿತ್ತು. ಅಗಸ್ತ್ಯ ಮುನಿಯ ಕಮಂಡಲುದಲ್ಲಿ ಹೊರತು ಇನ್ನೆಲ್ಲೂ ನೀರು ಇರಲಿಲ್ಲ.

ಪಿ. ಎಸ್. ಬಾಮು, ಬಾಗಲಕೋಟೆ

ಕೂಡಲೇ ಗಣೇಶ ಕಾಗೆಯ ರೂಪದಲ್ಲಿ ಅಗಸ್ತ್ಯ ಮುಹಾಮುನಿಯ ಆಶ್ರಮಕ್ಕೆ ಹೋದ. ಅಲ್ಲಿ ಆ ಮುನಿ ದೀರ್ಘ ತಪಸ್ಸಿನಲ್ಲಿ ಮುಳುಗಿದ್ದಾನೆ. ಕಾಗೆಯ ರೂಪದಲ್ಲಿದ್ದ ಗಣಪ ಸದ್ದು ಮಾಡದೆ ಮಹರ್ಷಿಯ ಕಮಂಡಲುದಲ್ಲಿದ್ದ ನೀರನ್ನು ಬಗ್ಗಿಸಿ ಹಾರಿಹೋದ.

ಅಗಸ್ತ್ಯ ಮಹಾಮುನಿಯ ಕಮಂಡಲುದಲ್ಲಿದ್ದ ಜಲ ಪ್ರವಾಹವಾಗಿ ಭೂಲೋಕಕ್ಕೆ ಹರಿಯಿತು. ಅದು ಹಾಗೇ ಹರಿದು ದೇವೇಂದ್ರನಿದ್ದ ಅಡವಿಯನ್ನೂ ಮತ್ತು ಆ ಬಿದುರು ಪೊದೆಯನ್ನೂ ತೊಯ್ಸಿಸಿತು.

ಸ್ವಲ್ಪ ಸಮಯವಾದನಂತರ ಅಗಸ್ತ್ಯ ಮುನಿ ತಪಸ್ಸಿನಿಂದ ಎದ್ದು ಕಮಂಡಲುವನ್ನು ನೋಡಿದ. ಅದರಲ್ಲಿ ಒಂದು ತೊಟ್ಟಾದರೂ ನೀರಿರಲಿಲ್ಲ. ತುಸ ದೂರದಲ್ಲಿ ಕಮಂಡಲುವನ್ನು ಉರುಳಿಸಿದ ಕಾಗೆ ಕಾಣಿಸಿತು. ಋಷಿ ಅದನ್ನು ಓಡಿಸಿಕೊಂಡು ಹೋದ. ಆದರೆ ಅದು ಆತನ ಕೈಗೆ ಸಿಕ್ಕಲಿಲ್ಲ. ಆತನನ್ನು ಹದಿನಾಲ್ಕು ಲೋಕವೂ ಸುತ್ತಿಸಿತು. ಆಗ ಮಹರ್ಷಿಗೆ ಅನುಮಾನಬಂತು ; ಇದು ಸಾಮಾನ್ಯವಾದ ಕಾಗೆಯಲ್ಲವೆಂದು ಗ್ರಹಿಸಿ ದಿವ್ಯದೃಷ್ಟಿಯಿಂದ ನೋಡಿದ. ನಿಜವರಿವಾಯಿತು. ಅಗಸ್ತ್ಯನು ಗಣಪತಿಯಕಡೆ ತಿರುಗಿ "ಪ್ರಣವಸ್ವರೂಪನೇ, ನೀನೇಕೆ ಹೀಗೆ ಓಡುವೆ? ಲೋಕಕ್ಷೇಮಕ್ಕಾಗಿ ಮಾಡಿದ ಈ ಮಹಾ ಕಾರ್ಯ ನನಗೂ ಒಪ್ಪಿಗೆಯೇ. ಆದರೆ ನನ್ನ ಪೂಜೆ ಪುರಸ್ಕಾರಗಳಿಗೆ ಒಂದು ತೊಟ್ಟಾದರೂ ನೀರಿಲ್ಲವಲ್ಲಾ, ಏನುಮಾಡಲಿ?" ಎಂದ.

ಆಗ ವಿನಾಯಕನು ತನ್ನ ಸೊಂಡಲಿನಲ್ಲಿ ನೀರು ತುಂಬಿಕೊಂಡು ಬಂದು ಅಗಸ್ತ್ಯ ಮಹರ್ಷಿಯ ಕಮಂಡಲುದಲ್ಲಿ ಸುರಿದ.

ಮೊದಲು ವಿನಾಯಕನು ಅಗಸ್ತ್ಯ ಮಹರ್ಷಿಯ ಕಮಂಡಲುದಿಂದ ಸುರಿಸಿದ ಪ್ರವಾಹವೇ ಇಂದು ಕಾವೇರಿ ನದಿಯಾಗಿ ಹರಿಯುತ್ತಿದೆ. ಆನಂತರ ಆರು ತಲೆಗಳ ಸುಬ್ರಹ್ಮಣ್ಯಸ್ವಾಮಿ ಜನಿಸಿ, ಲೋಕಕಂಟಕನಾದ ಶೂರಪದ್ಮನನ್ನು ಸಂಹರಿಸಿದನು. ಇಂದಿಗೂ ಸಹ ಪ್ರತಿವರ್ಷವೂ ನಡೆಯುವ ಸುಬ್ರಮಣ್ಯಸ್ವಾಮಿ ಉತ್ಸವದಲ್ಲಿ ಶೂರಪದ್ಮನ ಸಂಹಾರ ಕಥೆಯನ್ನು ಹೇಳುವರು.



# ತಿಮ್ಮ

"ಸುಂದರಿ"

ನಮ್ಮ ಹಳ್ಳಿಯಲಿ ತಿಮ್ಮನು ಹುಡುಗ
ಓದನು ಬರೆಯನು ಬಹಾಳ ತುಡುಗ
ಒಂದಿನ ತಿಮ್ಮನ ತಂಟೆಗೆ ತಂದೆ
'ನಡೆ ಹೊರಗೆ'ಂದಟ್ಟಿದ ಸಿಟ್ಟಿಂದೆ.

ಪಾಪ, ತಿಮ್ಮ ಮಾಡುವನೇನಿನ್ನು ?
'ಅಯ್ಯೊ, ಹಸಿವೆ! ತಿನ್ನಲಿ ಏನನ್ನು'
ಯೋಚಿಸಿ, ಇಜಾರು ಬಿಗಿಯುತನಮ್ಮ
ಮಾಷ್ಟ್ರುಮನೆಗೈದಿ ಕರೆದನು : "ಅಮ್ಮ!

ಮಾಷ್ಟರು ಊಟವ ತಾರೆಂದು
ನನ್ನನು ಕಳಿಸಿದ್ದಾರಿಂದು."
ಈ ಮಾತನು ನಂಬಿದಳಾ ಅಮ್ಮ.
ಕ್ಯಾರಿಯರನೆ ಪಡೆದನು ತಿಮ್ಮ.

ದಡದಡನೆಂದಿತು ಎದೆಯೊಳಗೆ.
ಓಡಿದನೊಂದು ಕೆರೆ ಬಳಿಗೆ,
ಕುಳಿತನೊಂದು ಮರದಡಿಯಲ್ಲಿ
ಹಸಿವೆಯ ಅತ್ಯಾತುರದಲ್ಲಿ

ಆಗ ಕೇಳಿಸಿತು ದೀನದನಿ:
'ಅಯ್ಯಾ! ಅಪ್ಪಾ! ನನ್ನ ಧಣೀ!
ಹಸಿದೀ ಮಗುಗೊಂದೇ ತುತ್ತು!
ಪುಣ್ಯವುಂಟು—ನೀಡೊಂತುತ್ತು!'

ಬಡವೆಯಕೈಯಾ ಸೊರಗಿದ ಮಗುವ
ನೋಡಿ ಮನಕರಗಿ 'ಬಾ ಕೂಡವ್ವ.
ಮಗುವಿಗೆ ತಿನ್ನಿಸಿ, ನೀನೂ ಉಣ್ಣು.'
ಎಂದುಕೊಟ್ಟ ನಾಲಕು ತುತ್ತನ್ನು.

ಹೊಟ್ಟೆತುಂಬಿ ಸಾಕೆಂದಿ ತಾ ಮಗು.
ವಂದಿಸಿ ಎದ್ದಳು, ತಿಮ್ಮನವಳಿಗೂ,
'ನೀನುಣ್ಣಮ್ಮ ಮಿಕ್ಕುಳಿದುದನು
ಉಂಬೇನೆ'ಂದನು ತಿಮ್ಮನು ತಾನು.

ಅದಕವಳೆಂದಳು 'ಬಡಜನನಾವು,
ನೀರುಕುಡಿದು ಬದುಕುವ ಜನನಾವು
ಮಗು ಬದುಕಿತು ಉಂಡಂತಾಯ್ತಪ್ಪ.
ಪುಣ್ಯವಂತ ನೀನುಣ್ಣಪ್ಪ'

'ಅಯ್ಯೋ ಅವ್ಮಾ, ಸ್ವಲ್ಪುಣ್ಣಮ್ಮ
ನಾಲ್ಕೇ ತುತ್ತನು ಹಿಡಿಯಮ್ಮ?'
ಎನುತವಳಿಗೆ ಬಿಡದಿಕ್ಕಿದನು.
ಉಳಿದುದ ತಾತಿನ ಬಯಸಿದನು.

ಆಗಲೆಬಿತ್ತು ಬೆನ್ನಿಗೆ ಏಟು!
ಮಾಷ್ಟರು ನಿಂತರು ಸಿಟ್ಟಲಿಘಾಟು!
'ಭಡವಾ! ಭಂಡಾ! ಬಾ ನಡೆ ಮನೆಗೆ!
ತಕ್ಕರೀತಿ ಬಗೆಮಾಡುವೆ ನಿನಗೆ!'

ಬಯ್ಯಲು ಮಾಷ್ಟರು—'ಮಾಸಾಮಿ!
ತಾನುಣ್ಣದೆ ಕೊಟ್ಟನು ಸಾಮಿ!
ಒಳ್ಳೆ ಹುಡುಗನಿವ' ಎಂದಳು ಬಡವೆ.
ಕೇಳುವರಾರಾ ಬಡವೆಯ ಗೊಡವೆ?

ತಿಮ್ಮನ ಮೊರೆಯನು ಕೇಳುವರಿಲ್ಲ.
ಹೆಸರಾಯ್ತವನಿಗೆ—ಅನ್ನದಕಳ್ಳ!
ಪರೋಪಕಾರವೆ ತಿಮ್ಮನಬಾಳು.
ಬಾಳಲಿಕೆಂದೇ ಒಂದ್ಹಿಡಿಕೂಳು



# ನಾರಾಯಣಿ ಪಕ್ಷಿ

ಅಡವಿಯೊಂದರಲ್ಲಿ ನಾರಾಯಣಿ ಪಕ್ಷಿಯೊಂದಿತ್ತು. ಬಾಲ್ಯದಿಂದಲೂ ಅದಕ್ಕೆ ಉಪಕಾರ ಮಾಡುವ ಸ್ವಭಾವ. ಭೂಲೋಕದಲ್ಲಿ ಅದರ ಆಯುಷ್ಯಮುಗಿದನಂತರ ಅದು ಮಾಡಿದ್ದ ಪುಣ್ಯಫಲಗಳಿಗಾಗಿ ದೇವದೂತರು ಬಂದು ಆ ಪಕ್ಷಿಯನ್ನು ವಿಮಾನದಲ್ಲಿ ಕೂರಿಸಿಕೊಂಡು ಸ್ವರ್ಗಕ್ಕೆ ಕರೆದೊಯ್ದರು.

ಅಲ್ಲಿ ದೇವತೆಗಳೆಲ್ಲಾ ಆ ಪಕ್ಷಿಯನ್ನು ಗೌರವಿಸಿ "ನಿನಗೇನು ಬೇಕೋ ಬೇಡಿಕೋ" ಎಂದರು. ಆದರೆ ಏನು ಕೇಳಲೂ ಆ ಪುಣ್ಯ ಪಕ್ಷಿಗೆ ತೋರಲಿಲ್ಲ.

ಕೆಲಕಾಲ ಸ್ವರ್ಗದಲ್ಲಿ ಸುಖವಾಗಿ ಕಳೆದನಂತರ ಆ ಪಕ್ಷಿ ದೇವತೆಗಳ ಹತ್ತಿರಹೋಗಿ "ನನಗೆ ಇಲ್ಲಿ ತುಂಬಾ ಬೇಸರವಾಗಿದೆ. ಮತ್ತೆ ನಾನು ಭೂಲೋಕಕ್ಕೆ ಹೋಗಿರಲು ಅನುಗ್ರಹಿಸಿ" ಎಂದು ಕೇಳಿಕೊಂಡಿತು.

ಆಗ ದೇವತೆಗಳು ಆ ಪಕ್ಷಿಗೆ ತನಗಿಷ್ಟಬಂದ ರೂಪ ಹೊಂದಲು ಮತ್ತು ಯಾವ ಲೋಕಕ್ಕೆ ಯಾವಾಗಬೇಕೆಂದರೂ ಹೋಗಿ ಬರುವ ಶಕ್ತಿಯುಟಾಗಲು ವರವಿತ್ತರು. ಪಕ್ಷಿಹೊರಟಿತು.

ಆ ನಾರಾಯಣಿಪಕ್ಷಿ ಸಣ್ಣ ಪುಟ್ಟ ರೆಕ್ಕೆಗಳಿಂದ ಮಾನವರೂಪದಲ್ಲಿ ಭೂಲೋಕಕ್ಕೆ ಬಂತು. ತಾನು ಹಿಂದೆ ಇದ್ದ ಅಡವಿಯಲ್ಲೇತನಗೆ ಸೌಕರ್ಯವಿರುವಂತಹ ಒಂದು ಮನೆಯನ್ನು ಕಟ್ಟಿಕೊಂಡು ಕಾಲ ನೂಕುತಿತ್ತು.

ಹೀಗೇ ಇರಲು ಒಂದು ದಿನ ಆ ನಾರಾಯಣಿಗೆ ನಗರಕ್ಕೆ ಹೋಗಬೇಕೆಂಬ ಆಶೆ ಆಯಿತು. ಬಾಲ್ಯದಲ್ಲಿ ನಾರಾಯಣಿ ನಗರದಲ್ಲಿದ್ದ ತಾತನ ಮನೆಗೆ ಹೋಗಿದ್ದಾಳಂತೆ. ಊರಿನಲ್ಲಿ ಅನೇಕ ಸೌಕರ್ಯಗಳುಂಟು. ವಿನೋದಕೂಟಗುಳುಂಟು. ಬೇಸರವೆಂಬ ಮಾತೇ ಇರುವುದಿಲ್ಲ. ಸದಾ ಆನಂದವಾಗಿ ಕಾಲ ಕಳೆಯಬಹುದು-ಇದು ನಾರಾಯಣಿಯ ಎಣಿಕೆ.

ನಾರಾಯಣಿಗೆ ತನ್ನ ಬಾಲ್ಯದ ಸವಿ ನೆನಪಾಯಿತು. 'ಈ ಅಡವಿಯಲ್ಲಿ ಒಬ್ಬಳೇ ಎಷ್ಟುದಿನವೆಂತ ಕಾಲನೂಕಲಿ? ನಗರ

ಸಿ. ಬಾಬು, ಕಮಲಾಪುರ



ದಲ್ಲಿರುವ ತಾತನ ಮನೆಗೆ ಹೋಗುತ್ತೇನೆ. ಎಲ್ಲಸೌಖ್ಯಗಳನ್ನೂ ಅನುಭವಿಸಿ 'ಪಟ್ಟಣದ ಪಕ್ಷಿ' ಎಂದು ಹೆಸರು ಪಡೆಯುತ್ತೇನೆ" ಎಂದು ಯೋಚಿಸಿದಳು.

ಹಾಗೆಂದು ನಗರಕ್ಕೆ ಹೊರಡಲು ನಿರ್ಧರಿಸಿದಳು. ನಾರಾಯಣಿ ಮುಂಜಾನೆಯೇ ಊಟಮುಗಿಸಿ, ಒಳ್ಳೆ ಉಡುಪನ್ನು ಧರಿಸಿದಳು. ಪ್ರಯಾಣದ ಖರ್ಚಿಗಾಗಿ ಹಣ ತೆಗೆದುಕೊಂಡಳು. ಮನೆಕದ ಹಾಕಿದಳು. ಬೀಗದಕೈಯನ್ನು ಕಿಟಕಿಯ ಮೂಲೆಯೊಂದಕ್ಕೆ ತಗುಲಿಸಿದಳು. ಕಾಲುನಡಿಗೆಯಿಂದ ನಗರಕ್ಕೆ ಹೊರಡಲು ಸಿದ್ಧವಾದಳು.

ಮನೆಯಿಂದ ಎರಡು ಹೆಜ್ಜೆ ಇಟ್ಟಳೋ ಇಲ್ಲವೋ ಅಷ್ಟರಲ್ಲಿ "ಅಕ್ಕಾ ಅಕ್ಕಾ" ಎಂಬ ಶಬ್ದ ಕೇಳಿತು. ಒಂದು ಜಿಂಕೆ ಮರಿ ಓಡುತ್ತಾ ಬಂತು. ಆ ಮರಿ ಭಯದಿಂದ ನಡುಗುತಿತ್ತು.

"ಏನಮ್ಮಾ ಜಿಂಕೆಮರಿ, ಹೀಗೆ ಬಂದೆ?" ಎಂದು ಕೇಳಿದಳು ನಾರಾಯಣಿ.

"ಏನುಹೇಳಲಿ? ನಮ್ಮ ಅರಣ್ಯಕ್ಕೆ ಬೇಟೆಗಾರರು ಬಂದಿದ್ದಾರೆ. ಕಣ್ಣಿಗೆ ಕಂಡ ಪ್ರಾಣಿಯನ್ನು ಅಟ್ಟಿಸಿಕೊಂಡು ಬರುತ್ತಿದ್ದಾರೆ. ನಿಮ್ಮ ಮನೆಯಲ್ಲಿ ತಲೆಮರೆಸಿಕೊಳ್ಳಲು ರವಷ್ಟು ಜಾಗಕೊಡು" ಎಂದು ಕೇಳಿಕೊಂಡಿತು ಜಿಂಕೆಮರಿ.

ಸರಿ, ಕರುಣಾಳು ನಾರಾಯಣಿ ತನ್ನ ಮನೆಬಾಗಿಲು ತೆಗೆದು ಜಿಂಕೆಮರಿಯನ್ನು ಒಳಗೆಬಿಟ್ಟು "ತಂಗೀ, ಹಿತ್ತಲಲ್ಲಿ ಅನೇಕ ವಿಧವಾದ ಸೊಪ್ಪು ಮತ್ತು ಫಲಗಳಿವೆ. ಸುಖವಾಗಿಉಂಡು ಸ್ವೇಚ್ಛೆಯಾಗಿರು" ಎಂದು ಹೇಳಿ, ಮನೇಬಾಗಿಲಿಗೆ ಬೀಗಹಾಕಿ, ಬೀಗದ ಕೈಯನ್ನು ಕಿಟಕಿಯ ಮೂಲೆಗೆ ತಗುಲಿಸಿದಳು.

ಆ ತರುವಾಯ ನಗರದ ತನ್ನ ತಾತನ ಮನೆಯಕಡೆ ಹೊರಟು ಹೊರಗೆ ಬಂದಳು.

ಎರಡು ಹೆಜ್ಜೆಯಾದರೂ ಇಡಲಿಲ್ಲ; ಮತ್ತೆ "ಅಕ್ಕಅಕ್ಕ" ಎಂಬ ಆರ್ತನಾದ ಕೇಳಿಸಿತು. ಮತ್ತೆ ಯಾರೋ ಆಪತ್ತಿನಲ್ಲಿ ಸಿಲುಕಿಕೊಂಡಿರುವರೆಂದುಕೊಂಡಳು ನಾರಾಯಣಿ. ಹಾಗೇ ತಿರುಗಿ ನೋಡಲು ಒಂದು ಬಾತುಕೋಳಿ ಕುಂಟುಗಾಲು ಹಾಕುತ್ತಾ ತನ್ನ

ಮನೆಕಡೆಗೆ ಬರುತ್ತಿರುವುದು ಕಾಣಿಸಿತು. "ಏನಮ್ಮಾ, ಬಾತುಕೋಳಿ ಇತ್ತಕಡೆ ಬಂದೆ?" ಎಂದಳು ಮಾನವರೂಪದಲ್ಲಿರುವ ಆ ನಾರಾಯಣಿಪಕ್ಷಿ.

"ಏನುಹೇಳಲಿ? ನಮ್ಮ ಗುಂಪೆಲ್ಲಾ ಸ್ನಾನಮಾಡಲು ಕೊಳಕ್ಕೆ ಹೋದವು. ನನಗೆ ಜಲಕವಾಡುವ ಹುಚ್ಚು ಬಹಳ. ಸ್ನಾನ ಮುಗಿಸಿಕೊಂಡಾದಮೇಲೆ 'ಮನೆಗೆ ಹೋಗೋಣಬಾ' ಎಂದು ಅವರು ಕರೆದರು. ಆದರೆ ನಾನು ಅವರ ಮಾತಿಗೆ ಕಿವಿಕೊಡದೆ ಜಲಕವಾಡುತ್ತಲೇ ಇದ್ದೆ. ಅವರು ಸಮಯವಾಯಿತೆಂದು ಹೊರಟು ಹೋದರು. ನನಗೆ ಮನೆಯದಾರಿ ತಿಳಿಯದೆ ಒದ್ದಾಡುತ್ತಿದ್ದೇನೆ." ಎಂದು ಹೇಳಿತು ಆ ಬಾತು.

ಅದಕ್ಕೆ ನಾರಾಯಣಿ "ಎಲೈಬಾತೇ, ನಿನಗೆ ಬಂದ ಅಪಾಯವೇನೂ ಇಲ್ಲ. ನಮ್ಮ ಮನೆ ಹಿತ್ತಲಲ್ಲಿ ಒಂದು ಕೊಳವಿದೆ. ಆ ಕೊಳದಲ್ಲಿ ನಿನ್ನಿಷ್ಟ ಬಂದಷ್ಟು ಹೊತ್ತು ಜಲಕವಾಡಿಕೊ. ನಿನಗೆ ಜಿಂಕೆಮರಿ ಜೊತೆಯಾಗಿರುತ್ತದೆ. ನಾನು ನಮ್ಮ ತಾತನ ಮನೆಯಿಂದ ಹಿಂತಿರುಗಿದಮೇಲೆ ನಿನ್ನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗುತ್ತೇನೆ" ಎಂದು ಹೇಳಿ ಕಿಟಕಿಯ ಮೂಲೆಯಲ್ಲಿರಿಸಿದ್ದ ಬೀಗದ ಕೈಯಿಂದ, ಬಾಗಿಲು ತೆಗೆದಳು. ಬಾತಿಗೆ ಹಿತ್ತಲಲ್ಲಿದ್ದಕೊಳ ತೋರಿಸಿದಳು. ತರುವಾಯ ಮತ್ತೆ ಬಾಗಿಲನ್ನು ಹಾಕಿ ಬೀಗದಕೈಯನ್ನು ಕಿಟಕಿಯಮೂಲೆಗೆ ತಗುಲಿಸಿ, ನಗರಾಭಿಮುಖವಾಗಿ ಹೊರಟಳು. ಆಗಲೇ ತುಂಬಾ ತಡವಾಗಿಬಿಟ್ಟಿತ್ತು. ಆದುದರಿಂದ ನಾರಾಯಣಿ ಬೇಗ ಬೇಗ ಹೆಜ್ಜೆಯಿಡುತ್ತಿದ್ದಳು.




ನಾಲ್ಕು ಹೆಜ್ಜೆಯಿಟ್ಟಳೋ ಇಲ್ಲವೋ, "ಅಕ್ಕಾ, ಅಕ್ಕಾ" ಎಂಬ ದೀನಾಲಾಪನೆ ಕೇಳಿ ಬಂತು. ಪುನ: ಸರಕ್ಕನೆ ಹಿಂತಿರುಗಿ ನೋಡಿದಳು ನಾರಾಯಣಿ.

ಒಂದು ಅಳಿಲು ಜೋಲು ಮೋರೆ ಹಾಕಿಕೊಂಡು ನಿಂತಿದೆ. ಅದನ್ನು ನೋಡಿ "ಅಳಿಲಮ್ಮಾ ಅಳಿಲಮ್ಮಾ, ಏನಿತ್ತಕಡೆ ಬಂದೆ?" ಎಂದು ಕೇಳಿದಳು ನಾರಾಯಣಿ.

"ಏನು ಹೇಳಲಿ? ಮಳೆಗಾಲಕ್ಕೆ ಸಾಕಾಗುವಷ್ಟು ತಿಂಡಿ ತಂದು ಮರದ ಪೊಟ್ರೆಯಲ್ಲಿಟ್ಟೆ.

ಕಾಳು ಕೂಡಿಸಿಕೊಂಡು ಬರಲು ಹೋಗು ವಷ್ಟರಲ್ಲಿ ಯಾರೋ ಕಳ್ಳರು ಬಂದು ಒಂದು ಕಾಳಾದರೂ ಉಳಿಸದೆ ದೋಚಿಕೊಂಡು ಹೋಗಿ ಬಿಟ್ಟಿದ್ದಾರೆ. ಇಷ್ಟು ದಿನದ ಕಷ್ಟ ವೃಥಾ ಆಯಿತು. ಇಂದು ಅಡಿಗೆಗೆ ಒಂದು ಕಾಳಾದರೂ ಇಲ್ಲ ಏನುಮಾಡುವುದೋ ಗೊತ್ತಾಗು ವುದಿಲ್ಲ'' ಎಂದು ತನ್ನ ಗೋಳು ಹೇಳಿ ಕೊಂಡಿತು.

ಇದನ್ನು ಕೇಳಿ ನಾರಾಯಣಿ "ಓಸ್, ಇದಕ್ಕೇಕೆ ಅಷ್ಟು ಚಿಂತೆ? ನನ್ನ ಮನೆಯಲ್ಲಿ ಬೇಕಾದಷ್ಟು ದವಸ ಧಾನ್ಯಗಳಿವೆ. ನಿನ್ನಿಷ್ಟ ಬಂದಷ್ಟು ದಿನ ನನ್ನ ಮನೆಯಲ್ಲಿ ಇದ್ದುಬಿಡು. ಜಿಂಕೆಮರಿ ಮತ್ತು ಕೋಳಿ ನಾನು ಬರುವ ವರೆವಿಗೂ ನಿನಗೆ ಸಹಾಯವಾಗಿರುತ್ತಾರೆ" ಎಂದು ಹೇಳಿ ಬಾಗಿಲು ತೆಗೆದು ಅಳಿಲನ್ನು ದವಸ ಧಾನ್ಯಗಳಿದ್ದ ಸ್ಥಳಕ್ಕೆ ಕರೆದೊಯ್ದಳು.

ನಾರಾಯಣಿ ಮತ್ತೆ ಬಾಗಿಲಿಗೆ ಬೀಗ ಹಾಕಿ ಬೀಗದ ಕೈಯನ್ನು ಕಿಟಕಿಯ ಮೂಲೆಯಲ್ಲಿಟ್ಟಳು. ತಾತನ ಮನೆಗೆಂದು ಹೊರಟಳು. ಆವೇಳೆಗಾಗಲೇ ಸಾಯಂಕಾಲವಾಗಿತ್ತು. ಇದ್ದಕ್ಕಿದ್ದಂತೆಯೇ ನಾರಾಯಣಿಯ ಮನಸ್ಸು ಬದಲಾಯಿಸಿತು. ಮನೆಗೆ ಹಿಂತಿರುಗಿದಳು. ಕಿಟಕಿ ಮೂಲೆಯಲ್ಲಿದ್ದ ಬೀಗದಕೈ ತೆಗೆದುಕೊಂಡು ಬಾಗಿಲು ತೆಗೆದಳು. ಉಡುಪು ಕಳಚಿ ಹಾಯಾಗಿ ಆರಾಮಾಸನದಮೇಲೆ ಮಲಗಿದಳು.

'ನಾನಿರುವ ಈ ಅಡವಿಯಲ್ಲಿ ಜೊತೆ ಪ್ರಾಣಿಗಳೆಲ್ಲಾ ಕಷ್ಟಪಡುತ್ತಿವೆ. ಅವು ತೊಂದರೆ ಪಡುತ್ತಿರುವುದನ್ನು ನೋಡಿಯೂ ಸಹ ಹೇಗೆ ಬಿಟ್ಟುಹೋಗಲಿ? ನನ್ನ ಸ್ನೇಹಿತರು ಕಷ್ಟಪರಿಸ್ಥಿತಿಯಲ್ಲಿರುವಾಗ ನಾನು ನಗರಕ್ಕೆ ಹೋದರೆ ಅಲ್ಲಿಯಾದರೂ ನನಗೆ ಸುಖವಿರುವುದೇ? ಇದೇ ನನಗೆ ನಗರ, ಇದೇ ನನಗೆ ನಾಕ, ನನ್ನ ಸ್ನೇಹಿತರಿಗೆ ಸಹಾಯಮಾಡುತ್ತ ನಾನೂ ಸಹ ಈ ಅಡವಿಯಲ್ಲೇ ಇದ್ದು ಬಿಡುತ್ತೇನೆ"

ಹೀಗೆ ನಿರ್ಧರಿಸಿ ಅಲ್ಲಿಯೇ ಉಳಿದುಬಿಟ್ಟಳು. ತಾತನ ಮನೆಗೆ ಹೋಗಲೇ ಇಲ್ಲ. ಅಲ್ಲೇ ಅವಳಿಗೆ ಸುಖವಾಯಿತು.



## ಬಣ್ಣದ ಚಿತ್ರಕಥೆ—೨

**ಗಂ**ಗಣ್ಣನ ತಾಯಿ ಬಹಳ ಆತುರದಿಂದ ಮಗನ ದಾರೀ ನೋಡುತ್ತಿದ್ದಳು. ಅವನು ಬರುತ್ತಲೇ ಬಹಳ ಪ್ರೀತಿಯಿಂದ ಹೋದ ಕೆಲಸವೇನಾಯಿತೆಂದು ಕೇಳಿದಳು. ದನವನ್ನು ಮಾರಿ ಕೈತುಂಬ ಹಣ ತರುತ್ತಾನೆಂದು ಅಂದುಕೊಂಡರೆ, ಅವನು ಕೈಯಲ್ಲಿ ತಂದ ಚೌಳೀಬೀಜಗಳನ್ನು ತೋರಿಸಿದನು.

'ದನವು ಹೋಯಿತು ; ಕೆಲಸಕ್ಕೆಬಾರದ ಈ ಬೀಜವೇಕೆ? ಅಷ್ಟೂ ತಿಳಿಯುವುದಿಲ್ಲ ಇವನಿಗೆ. ಬರಿ ಮೂಢ!' ಎಂದು ತಾಯಿ ಅವನನ್ನು ಬಯ್ದಳು. ಸಿಟ್ಟಿನಿಂದ ಆ ಬೀಜಗಳನ್ನು ಮನೆಯ ಹಿಂದುಗಡೆ ಮೂಲೆಗೆ ಬಿಸಾಡಿದಳು. ಇನ್ನು ಈ ಮಗನ ಗತಿ ಇಷ್ಟೇ ಎಂದು ಅವಳಿಗೆ ವ್ಯಸನವಾಯಿತು.

ಆದರೆ ಏನು ವಿಚಿತ್ರವೋ—ಮರುದಿನ ಆ ಮುದಿತಾಯಿ ಮನೆಯ ಹಿಂದುಗಡೆಗೆ ಹೋದಾಗ ಗುಂಪಾಗಿ ಬೆಳೆದ ಬಳ್ಳಿಗಿಡಗಳನ್ನು ನೋಡಿದಳು. ರಂಗುರಂಗಾಗಿ ಕಂಗೊಳಿಸುವ ಆ ಬಳ್ಳಿಗಳ ಕೊನೆ ಎಲ್ಲಿ ಹೋಗಿರುವುದೋ ಏನೋ! ಅವಳ ಆಶ್ಚರ್ಯಕ್ಕೆ ಮೇರೆಯಿರಲಿಲ್ಲ!

ಗಂಗಣ್ಣನೂ ಎದ್ದು ಬಂದು ಅದನ್ನು ನೋಡಿದ. ಸಂತೋಷದಿಂದಲೂ ಆತುರದಿಂದಲೂ ಹಾರಿಕುಣಿದ. ಅದು ಸಾಮಾನ್ಯ ಚೌಳೀಗಿಡವಲ್ಲವೆಂದೂ ಮಹಿಮೆಯಬಳ್ಳಿಯೆಂದೂ ಅವನಿಗೆ ತಿಳಿಯಿತು. ಆದುದರಿಂದ ಮುದಿತಾಯಿಗೆ ಹೇಳಿ ಗೊಡವೆ ಎಬ್ಬಿಸದೆ, ತಾನೇ ಈಬಳ್ಳಿಯ ಮಹಿಮೆಯನ್ನು ಕಂಡುಹಿಡಿಯಬೇಕೆಂದು ತೀರ್ಮಾನಿಸಿದ.

ಒಡನೇ ಅವನು ಗಬಗಬನೆ ಅದರಮೇಲೆ ಹತ್ತಿ ಏರಿಹೋದ. ಅದು ಮೇಘಮಂಡಲವನ್ನು ಮುಟ್ಟಿಕೊಂಡು ಹೋಗಿತ್ತು. ಧೈರ್ಯದಿಂದ ಅವನು ಕೊನೆ ಹಿಡಿದು ನಿಂತು ನಾಲ್ಕುಸುತ್ತಲೂ ನೋಡಿದ. ಆಗ ಮೇಘಮಂಡಲದಲ್ಲಿ ಅದ್ಭುತವಾದ ಒಂದು ದಿವ್ಯಭವನವು ತೋರಿಬಂತು. ಗಂಗಣ್ಣ ನಿರ್ಭೀತಿಯಿಂದ ಆ ಭವನವನ್ನು ಮುಟ್ಟಿದ.

ಬಾಗಿಲು ತಟ್ಟಿದಾಗ ಒಬ್ಬಳು ಅಪ್ಸರಸಿ ಬಾಗಿಲು ತೆರೆದಳು. ಅವಳು ಅವನನ್ನು ಕುರಿತು—"ಇದೇನಪ್ಪ ಇಲ್ಲಿ ಬಂದಿ? ಇದು ಜ್ವಾಲಾಮುಖನೆಂಬ ರಾಕ್ಷಸನ ಮನೆ. ಅವನು ನೋಡಿದರೆ ನಿನ್ನನ್ನು ನುಂಗಿಬಿಡುವನಲ್ಲ!" ಎಂದಳು.

ಆಗಲೇ ರಾಕ್ಷಸನು ಬರುವ ಸದ್ದುಕೇಳಿಸಿತು. ಆಗ ಅವಳು "ಸರಿ ಹೀಗೆ ಬಾ" ಎಂದು ಗಂಗಣ್ಣನ ಕೈಹಿಡಿದು ಕರೆದುಕೊಂಡು ಹೋಗಿ, ಯಾರೂ ಕಾಣದ ಒಂದು ಕೋಣೆಯೊಳಗೆ ಅವನನ್ನು ಅಡಿಗಿಸಿಟ್ಟಳು.

## ಒಂದೇ ಗೆರೆಯ ಚಿತ್ರ



ಎ. ಸಿ. ಕೇಶವರಾವ್



ಎಸ್. ಗೋಪಾಲರೆಡ್ಡಿ

## ಟೈಪ್‌ರೈಟಿಂಗ್ ಚಿತ್ರ



ಮಿಸ್. ಟಿ. ಆರ್. ಸುಶೀಲ



ಬಿ. ಯಶೋದಾದೇವಿ

## ಚುಟಿಕ

ಚಿಕ್ಕದೊಂದು ಇಲಿ
ಮಾಡುತಿತ್ತು ಉಲಿ
ಉಲಿಯ ಕೇಳಿ ಮುದವ ತಾಳಿ
ಬಂತು ಬೆಕ್ಕು ಕಲಿ!

ಕೆ. ಜಿ. ಶಂಕರಯ್ಯ, ದೊಡ್ಡಬಳ್ಳಾಪುರ

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1953 ನವಂಬರ್ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ:





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಸೆಪ್ಟೆಂಬರ್ 10 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸವುದಿಲ್ಲ. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು-26.

---

### ಅಕ್ಟೋಬರ್ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ: ಭುವನಸಂಪತ್ತು

ಎರಡನೇ ಫೋಟೋ: ಭವನದಂತಸ್ತು

ಕಳಿಸಿದವರು: ಬಿ. ಗಿರಿಜಾಕುಮಾರಿ, ಕುಂದಾಪುರ

ಅಕ್ಟೋಬರ್ ಸಂಚಿಕೆಯಲ್ಲಿ ಈ ಮೇಲಿನ ಶೀರ್ಷಿಕೆಗಳು ಬರುತ್ತವೆ. ಸದರಿ ಬಹುಮಾನದ ಮೊಬಲಗು ರೂ. 10/– ನ್ನು ಅಕ್ಟೋಬರ್ ಸಂಚಿಕೆ ಹೊರಟ ಕೂಡಲೇ ಕಳುಹಿಸಲ್ಪಡುತ್ತದೆ.

Photo by A. L. Syed



ಬಹುಮಾನ
ಪಡೆದ ಶೀರ್ಷಿಕೆ

ಹಸ್ತಾಕೃತಿ

ಕಳಿಸಿದವರು:
ಶಂಕರ ಕೊಂಗಿ, ಹುಬ್ಬಳ್ಳಿ

